# ಡಾ. ಬೆಸಗರಹಳ್ಳಿ ರಾಮಣ್ಣ

ಸ. ಚಿ. ರಮೇಶ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

**Dr. Besagarahalli Ramanna** - By Sa. Chi. Ramesh, published by Dr. Karigowda, Beechanahalli, Director, Prasaranga, Kannada University Hampi, Vidyaranya, Kamalapura - 583 221, Pages : viii+34, Rs. 10/-

First Edition 1995

ನಮ್ಮವರು ಪುಸ್ತಕಮಾಲೆ – ೨



ಮುಖಪುಟ ವಿನ್ಯಾಸ : ಕೆ. ಮಕಾಳಿ

ಪ್ರಕಾಶಕರು
**ಡಾ. ಕರೀಗೌಡ ಬೀಚನಹಳ್ಳಿ**
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಕಾಮಲಾಪುರ-೫೮೩ ೨೨೧

**ಬೆಲೆ : ಹತ್ತು ರೂಪಾಯಿಗಳು**

ಮುದ್ರಕರು
ನೇತ್ರಾ ಪ್ರಿಂಟರ್ಸ್
ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮

# ನಿಮ್ಮೊಡನೆ

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು, ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ಒಂದು ದೃಷ್ಟಿಯಿಂದ ಇದು ವಿದ್ಯೆಯನ್ನು ನಿರ್ಮಿಸುವ ಸಂಸ್ಥೆಯಾಗಿದೆ. ನಮ್ಮ ದೇಶದಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೇ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ, ಬೆಳಕನ್ನು ಉಂಟು ಮಾಡಿವೆ, ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರವಿಧಾನಗಳ ನಿರ್ಮಾಣ. ಈ ಬಗೆಯ ಶಾಸ್ತ್ರ-ಕಲೆ, ಅಭಿಜಾತ-ಜಾನಪದ, ಮಾರ್ಗ-ದೇಸಿ, ಸ್ವಕೀಯ-ಪರಕೀಯ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆ ದ್ವಂದ್ವಗಳ ಸಾಮರಸ್ಯ ಮತ್ತು ಸಂಘರ್ಷಗಳ ಒಡಲಿನಲ್ಲಿ ಹುಟ್ಟಿಬರುವ ತಿಳುವಳಿಕೆಯನ್ನು ಹಿಡಿದುಕೊಂಡು ಕನ್ನಡದಲ್ಲಿ ಅದಕ್ಕೆ ಅಭಿವ್ಯಕ್ತಿಯನ್ನು ಕೊಡಬೇಕಾಗಿದೆ. ಭಾಷೆಯಲ್ಲಿ ಮೂಡಿ ಬರುವ ತಿಳುವಳಿಕೆ ಮಾತ್ರ ಉಪಯುಕ್ತವಾಗಬಲ್ಲದು. ಅನುವಾದ, ಭಾಷಾಂತರ, ವಿವರಣೆ, ಟೀಕೆ, ವಿಮರ್ಶೆ ಇಂಥ ವಿಧಾನಗಳನ್ನು ಅನುಸರಿಸುತ್ತ ತಿಳುವಳಿಕೆಯ ಹೊಸ ಸಾಹಿತ್ಯ ನಿರ್ಮಾಣವಾಗಬೇಕು. ಅಂಥ ಎಲ್ಲ ಬಗೆಯ ಸಂಶೋಧನಕ್ಕೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಅನುಕೂಲವಿದೆ, ಅವಕಾಶವೂ ಇದೆ.

ಹೀಗೆ ಮೂಡಿ ಬಂದ ಸಾಹಿತ್ಯ ಪ್ರಕಟವಾಗಬೇಕು. ನಮ್ಮ ವಿಶ್ವವಿದ್ಯಾಲಯದ ಪ್ರಸಾರಾಂಗಕ್ಕೆ ಇಂಥ ಗುರುತರವಾದ ಜವಾಬ್ದಾರಿಯಿದೆ. ವಿದ್ಯೆಯ ಸೃಷ್ಟಿಯಾಗುವುದು ಈ ಪ್ರಸಾರಾಂಗದಲ್ಲಿ. ನಾಡಿನ ತಜ್ಞರಿಂದ ಗ್ರಂಥಗಳನ್ನು ಬರೆಯಿಸಿ ಪ್ರಕಟಿಸುವುದರ ಜೊತೆಗೆ, ವಿಶ್ವವಿದ್ಯಾಲಯ ಸೃಷ್ಟಿಸುತ್ತಿರುವ ಸಾಹಿತ್ಯವನ್ನೂ ಅದು ಪ್ರಕಟಿಸಬೇಕು. ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೆ ತನ್ನ ಅರ್ಥವನ್ನು ಕಳೆದುಕೊಳ್ಳುತ್ತಿದೆ. ಕಲ್ಲಿನಲ್ಲಿರುವ ಶಾಸನಗಳನ್ನು ಕಣ್ಣೆತ್ತಿ ನೋಡದ ಜನ ಅದೇ ಪುಸ್ತಕದಲ್ಲಿ ಪ್ರಕಟಗೊಂಡರೆ ಓದುತ್ತಾರೆ, ಅರ್ಥ ಮಾಡಿಕೊಳ್ಳುತ್ತಾರೆ. ಜನರಾಡುವ ಶಬ್ದಗಳನ್ನೇ ಕೋಶದಲ್ಲಿ ಸಂಗ್ರಹಿಸಿದರೆ ಆ ಶಬ್ದಗಳಿಗೆ ತಿಳುವಳಿಕೆಯ ಬೆಲೆ ಬರುತ್ತದೆ.

ನಮ್ಮ ಪ್ರಸಾರಾಂಗ, ಈಗಾಗಲೇ ಕೆಲವು ಪುಸ್ತಕಗಳನ್ನು ಪ್ರಕಟಿಸಿದೆ. ಪ್ರಸಾರಾಂಗ, ತನ್ನ ಪ್ರಕಟಣೆಗಳ ಮೂಲಕ ಸಾರ್ಥಕವಾಗಬೇಕಾದ ದಾರಿಯನ್ನು ಹುಡುಕಿಕೊಳ್ಳುತ್ತಿದೆ. ಲೋಕದಲ್ಲಿಯ ತಿಳುವಳಿಕೆಯನ್ನು ಸಂಗ್ರಹಿಸಿ ತಿರುಗಿ ಲೋಕಕ್ಕೇ ದಾನ ಮಾಡುವ ಪ್ರಕ್ರಿಯೆ ಪ್ರಸಾರಾಂಗದಲ್ಲಿ ನಡೆಯುತ್ತಿದೆ. ಸಂಗ್ರಹವಾದ ತಿಳುವಳಿಕೆಗೆ ಗ್ರಂಥಗಳ ರೂಪವನ್ನು ಕೊಡುವ ಹೊಣೆಗಾರಿಕೆ ಪ್ರಸಾರಾಂಗದ್ದಾಗಿದೆ. ಈ ರೂಪಾಂತರದ ಪ್ರಕ್ರಿಯೆ ನಮ್ಮ ವಿಶ್ವವಿದ್ಯಾಲಯದ ವೈಶಿಷ್ಟ್ಯವಾಗಿದೆ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು

# ಪರಿವಿಡಿ

# ಡಾ. ಬೆಸಗರಹಳ್ಳಿ ರಾಮಣ್ಣ

ಅರವತ್ತರ ದಶಕದ ಆರಂಭದಲ್ಲಿ ಕಥೆಗಳನ್ನು ಬರೆಯಲು ತೊಡಗಿದ ಡಾ. ಬೆಸಗರಹಳ್ಳಿ ರಾಮಣ್ಣನವರು ಕನ್ನಡದ ಓದುಗರಿಗೆ ಚಿರಪರಿಚಿತರು. ಕನ್ನಡದ ಶಕ್ತಿಶಾಲಿ ಕಥೆಗಾರರಲ್ಲಿ ಒಬ್ಬರಾದ ಇವರ ಬರವಣಿಗೆ ಸರಳ, ನೇರ; ಗ್ರಾಮೀಣ ಬದುಕನ್ನೇ ಕೇಂದ್ರವಾಗಿಟ್ಟುಕೊಂಡು ಬರೆದವರಲ್ಲಿ ರಾಮಣ್ಣನವರು ಮುಖ್ಯರಾಗಿದ್ದಾರೆ. ಸಣ್ಣಕಥೆಗಳ ಪರಂಪರೆಯನ್ನು ಬಲಪಡಿಸಿರುವ ಪ್ರಮುಖರಲ್ಲಿ ಒಬ್ಬರಾಗಿದ್ದಾರೆ. ಇವರು ಮಂಡ್ಯ ಜಿಲ್ಲೆಯ ಮದ್ದೂರು ತಾಲೂಕಿನ ಬೆಸಗರಹಳ್ಳಿಯವರು. ತಂದೆ ಚಿಕ್ಕ ಎಲ್ಲೇಗೌಡ, ತಾಯಿ ದೊಡ್ಡತಾಯಮ್ಮ. ಆಗಸ್ಟ್ ೧೫, ೧೯೩೮ರಂದು ಹುಟ್ಟಿದರು. ತಂದೆ ವ್ಯವಸಾಯಗಾರರಾಗಿದ್ದರಿಂದ ಇವರ ಬಾಲ್ಯ ಹಳ್ಳಿಯಲ್ಲೇ ಕಳೆಯಿತು. ಇವರು ಬೆಸಗರಹಳ್ಳಿ, ಮದ್ದೂರು, ಮೈಸೂರುಗಳಲ್ಲಿ ವಿದ್ಯಾಭ್ಯಾಸವನ್ನು ನಡೆಸಿದರು.

ವೃತ್ತಿಯಲ್ಲಿ ವೈದ್ಯರಾದ ಇವರಿಗೆ ಕನ್ನಡ ಸಾಹಿತ್ಯದ ಬಗ್ಗೆ ಅಪಾರ ಆಸಕ್ತಿ. ಇದಕ್ಕೆ ಕಾರಣ ಬಾಲ್ಯದಲ್ಲಿ ಕೇಳಿದ ಅಜ್ಜಿಯ ಕಥೆಗಳು. ಇವರ ತಂದೆಯ ಸೋದರ ಮಾವನ ಹೆಂಡತಿ 'ದೇಸಳ್ಳಿ ಅಮ್ಮ' ತನ್ನ ಒಡಲಲ್ಲಿ ತುಂಬಿಕೊಂಡಿದ್ದ ಲೆಕ್ಕವಿಲ್ಲದಷ್ಟು ಕಥೆಗಳನ್ನು ಹೇಳುತ್ತಿದ್ದಳಂತೆ. ಆಕೆಯ ಅದ್ಭುತ ಕಥೆಗಾರಿಕೆಯು ಇವರನ್ನು ಕಲ್ಪನಾ ಲೋಕಕ್ಕೆ ಕರೆದುಕೊಂಡು ಹೋದವು. ಆಕೆ ತನ್ನ ಕಥೆಯಲ್ಲಿ ಸೃಷ್ಟಿಸಿದ ಚಂದ್ರಲೋಕ, ಪಾತಾಳಲೋಕ, ಮಂತ್ರಗಾರರು, ಸುರಸುಂದರಿಯರು ಇನ್ನು ಮುಂತಾದವುಗಳ ಪ್ರೇರಣೆಯಿಂದ ರಾಮಣ್ಣನವರು ಕನ್ನಡದ ಕಥೆಗಾರರಾಗಿ ಅರಳಿದರು.

ಇವರಿಗೆ ಸಾಹಿತ್ಯಾಸಕ್ತಿ ಮೂಡಿಸುವಲ್ಲಿ ತಮ್ಮ ಸೋದರಮಾವ ಮತ್ತು ಅಣ್ಣ ಪುಟ್ಟಸ್ವಾಮಿಯವರು ಮುಖ್ಯರಾಗಿದ್ದಾರೆ. ಇಂಗ್ಲಿಷ್ ಎಂ.ಎ. ಮಾಡಿದ್ದ ಈ ಮಾವ ಕಾಫ್ಕನ 'ದಿ ಟ್ರೇಲ್', ದಾಸ್ತೂವೆಸ್ಕಿಯ 'ಕ್ರೈಮ್ ಅಂಡ್ ಪನಿಶ್‌ಮೆಂಟ್', ಟಾಲ್‌ಸ್ಟಾಯ್‌ನ 'ಅನ್ನಾ ಕೆರನೀನಾ' ಕಾದಂಬರಿಗಳ ಬಗ್ಗೆ ಬಹಳ ಗಂಭೀರವಾಗಿ ಅಭ್ಯಾಸ ಮಾಡುವ ವಿದ್ಯಾರ್ಥಿಗಳ ಮುಂದೆ ಪ್ರಶ್ನೆಗಳ ಸುರಿಮಳೆಗರೆದು ಎಲ್ಲರೆದುರು ಇವರ ಜ್ಞಾನವನ್ನು ಅಗ್ನಿಪರೀಕ್ಷೆಗೆ ಗುರಿಪಡಿಸುತ್ತಿದ್ದರು. ೭೦ ವರ್ಷ ವಯಸ್ಸಾಗಿದ್ದರೂ ಅಧ್ಯಯನದ ದಾಹ ಕುಂದಿರದಿದ್ದ ಮಾವನ 'ಛಲ' ತುಂಬಾ ವಿಚಿತ್ರವೆನಿಸಿದರೂ ರಾಮಣ್ಣನವರಿಗೆ ಅದು ಸಾಹಿತ್ಯದ ಕಡೆ ಒಲವು ಮೂಡಿಸಲು ಮೂಲ ಪ್ರೇರಣೆಯಾಯಿತು.

ಸಾಹಿತ್ಯದ ಕಡೆ ಹೆಚ್ಚು ವಾಲುವಂತೆ ಮಾಡಿ, ಅದರ ಹುಚ್ಚು ಹಿಡಿಸಿದ ಇನ್ನೊಬ್ಬ ವ್ಯಕ್ತಿ ಎಂದರೆ ಇವರ ಪ್ರೀತಿಯ ಅಣ್ಣ ಪುಟ್ಟಸ್ವಾಮಿ. ಈತನೊಬ್ಬ ದುರಂತ ವ್ಯಕ್ತಿ. ಅವರನ್ನು ತಮ್ಮ ಪ್ರಾಣಕ್ಕಿಂತಲೂ ಹೆಚ್ಚು ಪ್ರೀತಿಸುತ್ತಿದ್ದರು. ಎಸ್.ಎಸ್.ಎಲ್.ಸಿ. ವರೆಗೆ ಓದಿದ ಅಣ್ಣ, ಸ್ನೇಹಿತನ ಮಾತನ್ನು ಕೇಳಿ ಒಮ್ಮೆ ಮನೆಯಿಂದ ೧೨೦೦ ರೂಗಳನ್ನು ತೆಗೆದುಕೊಂಡು ಓಡಿಹೋಗಿದ್ದರು. ಇದರಿಂದ ತುಂಬಾ ದು:ಖಪಟ್ಟು, ಅಣ್ಣನನ್ನು ನೆನೆದು ನನ್ನವ್ವನನ್ನು ತಬ್ಬಿ ಬಿಕ್ಕುತ್ತಿದ್ದಾಗ, ಅವರಿವರು ಇವನನ್ನು ಟೀಕಿಸಿ: "ಅಣ್ಣನ ಕತೆ ಇಂಗಾಯ್ತು......, ಇವನದು ಯಂಗೋ..." (ಕನ್ನಂಬಾಡಿ ಮುನ್ನುಡಿ) ಅಂದರಂತೆ. ಅಣ್ಣ ಮನೆ ಬಿಟ್ಟವನು ಹುಡುಕಲು ಹೋದವರ ಜೊತೆ ಮರಳಿ ಬಂದಾಗ ಇವರಿಗಾದ ಸಂತೋಷಕ್ಕೆ ಎಲ್ಲೆ ಇಲ್ಲ. ಅಣ್ಣ ಮದ್ದೂರಿನ ಹೈಸ್ಕೂಲಿನಿಂದ ಬರುವುದು ಕ್ಷಣ ತಡವಾದರೂ ಇವರಿಗೆ ಸಹಿಸಲಾಗದಷ್ಟು ಗಾಬರಿಯಾಗುತ್ತಿತು. "ದಾರಿಯನ್ನೇ ಕಾದು ಅವನು ಬಂದಾಗ ಮೂರು ಲೋಕಗಳೇ ಸಿಕ್ಕಿದವನಂತೆ ಕುಣಿತ ಹಾಕುತ್ತಿದ್ದೆ...." (ಕನ್ನಂಬಾಡಿ ಮುನ್ನುಡಿ). ಅಣ್ಣನು ಹೊಲ ಗದ್ದೆಗಳ ಬಳಿ ರನ್ನನು ಬಣ್ಣಿಸಿದ 'ದುರ್ಯೋಧನ ಪ್ರಲಾಪ'ವನ್ನು ನಟಿಸಿ ಹಾಡಿದ್ದು, ಕುಮಾರವ್ಯಾಸನ ಪದ್ಯಗಳನ್ನು ಹಾಡಿದ್ದು, ಕುವೆಂಪು ಗೀತೆಗಳನ್ನು ಹಾಡಿದ್ದು, ಬುದ್ಧ ತನ್ನ ಮಗ ಮತ್ತು ಹೆಂಡತಿಯನ್ನು ಬಿಟ್ಟು ಕಾಡಿಗೆ ಹೋದದ್ದನ್ನು ಬಣ್ಣಿಸಿ ಹೇಳಿದ್ದು, ಇದರ ಬಗೆಗೆ ಒಂದು ನಾಟಕ ಬರೆದದ್ದು, ಮೈಸೂರಿನ ದಸರಾ ವಸ್ತು ಪ್ರದರ್ಶನದಲ್ಲಿ (೧೯೫೪) ಕುಮಾರವ್ಯಾಸ ವಿರಚಿತ 'ಕರ್ನಾಟ ಭಾರತ ಕಥಾಮಂಜರಿ'ಯನ್ನು ಕೊಂಡು ಅದರಲ್ಲಿ ಶ್ರೀ ಕುವೆಂಪುರವರು ಪೋಣಿಸಿರುವ ತೋರಣನಾಂದಿಯನ್ನು ಅತ್ಯಂತ ಭಾವುಕನಾಗಿ ಓದಿದ್ದು – ಇವೆಲ್ಲಾ ಘಟನೆಗಳು ಇವರನ್ನು ಸಾಹಿತ್ಯದ ಕಡೆ ಸೆಳೆಯುವಂತೆ ಮಾಡಿವೆ.

ಸಾಹಿತ್ಯದ ಮೂಲ ಪ್ರೇರಣೆ ಇವರ ಮನೆಯವರಿಂದಲೇ ಆಯಿತು. ಇವರ ಸಾಹಿತ್ಯದ ಆಸಕ್ತಿ ಹೆಮ್ಮರವಾಗಿ ಬೆಳೆದದ್ದು ಮೈಸೂರಿನಲ್ಲಿ ಓದು ಆರಂಭಿಸಿದಾಗ. ೧೯೫೭ರಿಂದ ೫೮ರ ವರೆಗೆ ಯುವರಾಜ ಕಾಲೇಜಿನ ವಿದ್ಯಾರ್ಥಿಯಾಗಿದ್ದರು. ಅಲ್ಲಿ ಜಿ.ಎಸ್.ಶಿವರುದ್ರಪ್ಪನವರು ಸಾಹಿತ್ಯ ಬೋಧಿಸಿದ ರೀತಿ ಇವರನ್ನು ಇನ್ನೂ ಹೆಚ್ಚು ಸಾಹಿತ್ಯದ ಕಡೆ ಸೆಳೆದು ಆಪ್ತನನ್ನಾಗಿಸಿತು. ಕನ್ನಡದ ದಿಗ್ಗಜಗಳಾದ ಡಿ.ಎಲ್.ಎನ್. ಹಾಗೂ ತೀ.ನಂ.ಶ್ರೀ. ಅವರುಗಳ ಬಗೆಗೆ ಅಪಾರವಾದ ಗೌರವ ಭಕ್ತಿಯನ್ನು ಇಟ್ಟುಕೊಂಡಿದ್ದರು. ಅವರುಗಳನ್ನು ನಡೆದಾಡುವ ಕನ್ನಡದ 'ಶಬ್ದಕೋಶ', 'ಜ್ಞಾನಕೋಶ' ಗಳೆಂದು ದೂರದಿಂದ ನೋಡಿ ಆನಂದಿಸುತ್ತಿದ್ದರು. ಮಹಾರಾಜ ಕಾಲೇಜಿನ ಕರ್ನಾಟಕ ಸಂಘವು ನಡೆಸುತ್ತಿದ್ದ 'ಸಾಹಿತ್ಯ ಸಂಜೆ'ಗಳಲ್ಲಿ ಅವರು ಮಾಡಿದ ಭಾಷಣಗಳು ಇವರಿಗೆ ಸಾಹಿತ್ಯದಲ್ಲಿ ಅಭಿರುಚಿಯನ್ನು ಹುಟ್ಟಿಸಿದವು. ಇದೇ ಕಾಲೇಜಿನ ಜೂನಿಯರ್ ಬಿ.ಎ. ಹಾಲ್‌ನಲ್ಲಿ ಅನೇಕ ಕನ್ನಡದ ಪ್ರಸಿದ್ಧ ಲೇಖಕರನ್ನು, ವಿದ್ವಾಂಸರನ್ನು ಕಂಡು, ಅವರುಗಳ ಭಾಷಣಗಳಿಂದ ಪ್ರಭಾವಿತರಾದರು.

ಯುವರಾಜ ಕಾಲೇಜಿನ ವಿದ್ಯಾರ್ಥಿಗಳ 'ಲಲಿತ ಕಲಾ ಸಂಘ'ದಿಂದ 'ವಸಂತ' ಎಂಬ ವಾರ್ಷಿಕ ಪತ್ರಿಕೆ ತರುವುದಕ್ಕಾಗಿ ವಿದ್ಯಾರ್ಥಿಗಳಿಂದ ಕಥೆ, ಕವನ, ಪ್ರಬಂಧಗಳನ್ನು ಆಹ್ವಾನಿಸಿದ್ದರು. ಜಿ.ಎಸ್.ಶಿವರುದ್ರಪ್ಪನವರು ಅದರ ಮುಖ್ಯಸ್ಥರಾಗಿದ್ದರು. 'ವಸಂತ' ಪತ್ರಿಕೆಗಾಗಿ ಇವರು 'ಹಸುವಿನ ಕಹಳೆ' (೧೯೫೮) ಎಂಬ ಕಥೆ ಬರೆದು ಜಿ.ಎಸ್.ಎಸ್.ಗೆ ಕೊಟ್ಟರು. ಆದರೆ 'ವಸಂತ' ಪ್ರಕಟವಾಗಲೇ ಇಲ್ಲ. ಈ ಕಾರಣದಿಂದ ಇವರ ಪ್ರೀತಿಯ ಚೊಚ್ಚಲ ಕಥೆ ಪ್ರಕಟವಾಗಲಿಲ್ಲ. ಕಥೆಯನ್ನು ಜಿ.ಎಸ್.ಎಸ್. ಹಿಂತಿರುಗಿಸಿ "ಪತ್ರಿಕೆ ಪ್ರಕಟವಾಗಲಿಲ್ಲ. ಹೀಗಾಯ್ತು ಅಂತ ಬೇಜಾರು ಮಾಡಿಕೊಳ್ಳದೆ ಸಾಹಿತ್ಯವನ್ನು ಓದುವುದನ್ನಾಗಲಿ, ಬರೆಯಬೇಕೆಂಬ ಇಚ್ಛೆಯನ್ನಾಗಲೀ ತುಚ್ಛವಾಗಿ ಕಾಣಬಾರದು" (ಕನ್ನಂಬಾಡಿ ಮುನ್ನುಡಿ) ಎಂದು ಸಮಾಧಾನ ಹೇಳಿದರು. ಇದರಿಂದ ಇವರ ಕನ್ನಡ ಸಾಹಿತ್ಯ ಪ್ರೇಮ ಮತ್ತಷ್ಟು ಹೆಚ್ಚಿತು. ಇವರ ಎದೆಯಲ್ಲಿ ಸಾಹಿತ್ಯದ ಆಸಕ್ತಿ ಮರವಾಗಿ ಬೆಳೆಯುತ್ತಿರುವಾಗಲೇ ಸೀನಿಯರ್ ಇಂಟರ್ ಮೀಡಿಯೆಟ್ ತೇರ್ಗಡೆ ಹೊಂದಿ (೧೯೫೮), ಮೈಸೂರು ಮೆಡಿಕಲ್ ಕಾಲೇಜನ್ನು ಮನೆಯವರ ಒತ್ತಾಯಕ್ಕೆ ಸೇರಿಕೊಂಡರು. ಇದು ಇವರಿಗೆ ಇಷ್ಟವಿರಲಿಲ್ಲ. ಇಲ್ಲೂ ಕಡಿಮೆ,ಆಗದ ಸಾಹಿತ್ಯದ ಆಸಕ್ತಿ ಇವರಲ್ಲಿ "ಮೂಳೆ, ನರ, ಮಾಂಸ, ಸೂಕ್ಷ್ಮದರ್ಶಕ ಯಂತ್ರಗಳ, ಕಪ್ಪೆಗಳ ಒಡನಾಟದ ನಡುವೆಯೂ ಕನ್ನಡ ಸಾಹಿತ್ಯ ಪ್ರೇಮ ಚಿಗುರೊಡೆಯುತ್ತಲೇ ಇತ್ತು" (ಕನ್ನಂಬಾಡಿ ಮುನ್ನುಡಿ).

ರಾಮಣ್ಣನವರು, ಕುವೆಂಪು, ಟಾಲ್‌ಸ್ಟಾಯ್, ದಾಸ್ತೋವೆಸ್ಕಿ, ಮೈಕೆಲ್ ಶೊಲ್‌ಕೋವ್, ಚೆಕಾವ್, ಪ್ರೇಮಚಂದ್ ಇನ್ನು ಮುಂತಾದ ಮಹಾಚೇತನಗಳಿಂದ ಪ್ರೇರಣೆ ಪಡೆದಿದ್ದಾರೆ. ಅವರುಗಳ ಗ್ರಂಥಗಳನ್ನು ಆಗಾಗ ಗಂಭೀರವಾಗಿ ವ್ಯಾಸಂಗ ಮಾಡುತ್ತಾರೆ. ಕುವೆಂಪು ಸಾಹಿತ್ಯವನ್ನು ಓದಿ ಅದರಲ್ಲಿ ಚಿತ್ರಿತವಾಗಿರುವ ಬಾಲ ಪಾತ್ರಗಳ ಬಗೆಗೆ ಲೇಖನಗಳನ್ನು ಬರೆದಿದ್ದಾರೆ. ಇಂತಹ ೫೦ಕ್ಕೂ ಹೆಚ್ಚು ಸಾಹಿತ್ಯ ಲೇಖನಗಳು 'ಕನ್ನಂಬಾಡಿ' ಪತ್ರಿಕೆಯ "ಒರೆಗಲ್ಲು" ತಲೆಬರಹದಡಿಯಲ್ಲಿ ಪ್ರಕಟಗೊಂಡಿವೆ. ಕುವೆಂಪುರವರ 'ಕಾನೂರು ಹೆಗ್ಗಡತಿ'ಯ ಓದು ಪ್ರತಿ ಬಾರಿಯೂ ಮರಣಾನಂದವನ್ನು ನೀಡುವುದೆಂದು ಹೇಳುತ್ತಾರೆ. ವೈದ್ಯರಾಗಿ ವೈದ್ಯಕೀಯದ ಪುಸ್ತಕಗಳಿಗಿಂತ ಸಾಹಿತ್ಯದ ಪುಸ್ತಕಗಳನ್ನು ಹೆಚ್ಚು ಸಂಗ್ರಹಿಸಿದ್ದಾರೆ. ಸಾಹಿತ್ಯದ ಪುಸ್ತಕಗಳ ಬೆಟ್ಟದ ತಳದಲ್ಲಿ ಬಿದ್ದ ಕಲ್ಲುಗಳಿಗೆ ಇವರಲ್ಲಿ ಇರುವ ವೈದ್ಯಕೀಯದ ಪುಸ್ತಕಗಳನ್ನು ಹೋಲಿಸಬಹುದು.

'ಪ್ರಜಾವಾಣಿ' ದೀಪಾವಳಿ (೧೯೬೨) ಕಥಾ ಸ್ಪರ್ಧೆಯಲ್ಲಿ ಇವರ 'ಹಾವಿಲ್ಲದ ಹುತ್ತ' ಕಥೆ ವಿದ್ಯಾರ್ಥಿ ವಿಭಾಗದಲ್ಲಿ ತೀರ್ಪುಗಾರರ ಮೆಚ್ಚುಗೆ ಪಡೆದಿತ್ತು. ಈ ಕಥೆಗೆ ಸ್ನೇಹಿತನ ತಮಾಷೆಯೇ ಪ್ರೇರೇಪಣೆಯಾಗಿತ್ತು. ಈ ಕಥೆಗೆ ಖ್ಯಾತ ಲೇಖಕರಾದ ಶ್ರೀ ನಿರಂಜನರು ಒಳ್ಳೆಯ ಮಾತನ್ನು ಬರೆದಿದ್ದರು. ದಿನ ಕಳೆದಂತೆ ಇವರಿಗೆ ತಮ್ಮ

ಬರವಣಿಗೆಯ ಬಗೆಗೆ ಆತ್ಮವಿಶ್ವಾಸ ಬರತೊಡಗಿತ್ತು. ಆಗಲೇ ಇವರು ಬರೆದ ಕಥಗಳು 'ಲೋಕಾಪಾವನಿ', 'ಸುಧಾ' ಪತ್ರಿಕೆಗಳಲ್ಲಿ ಪ್ರಕಟವಾಗಿದ್ದವು. ಇವರ ಕಥೆಗಳ ಬಗೆಗೆ ಮೆಚ್ಚಿ ಅಭಿಮಾನದಿಂದ ಶ್ರೀ ದೇ.ಜವರೇಗೌಡರು ಮೆಚ್ಚಿಗೆ ವ್ಯಕ್ತಪಡಿಸಿ ಬೆನ್ನುತಟ್ಟಿದ್ದು ಬೆಳೆಯುವ ಪೈರಿಗೆ ನೀರೆರೆದಂತಾಯಿತು. ವೈದ್ಯಕೀಯ ವಿದ್ಯಾರ್ಥಿಯಾಗಿದ್ದರೂ ಸೃಜನಶೀಲರಾದ ನಾಗವಾರ, ವೀರಭದ್ರ, ಐತಾಳ, ರಮಾಕಾಂತ, ಆಲನಹಳ್ಳಿ ಕೃಷ್ಣ, ಶಿವತೀರ್ಥ ಮುಂತಾದ ಸಾಹಿತಿ ಮಿತ್ರರ ಜೊತೆಗೆ ಅನೇಕ ರಾತ್ರಿ ರಸ್ತೆಗಳಲ್ಲಿ ಅಲೆಯುತ್ತಾ ಸಾಹಿತ್ಯದ ಬಗೆಗೆ ಚರ್ಚಿಸುತ್ತಿದ್ದರು. ಇದರ ಫಲವಾಗಿ ದೀಪಾವಳಿ ಕಥಾ ಸ್ಪರ್ಧೆಯಲ್ಲಿ 'ಸುಗ್ಗಿ'ಕಥೆಗೆ (೧೯೬೫) ಪ್ರಥಮ ಬಹುಮಾನ ಬಂದಿತು.

ರಾಮಣ್ಣನವರ ಕೆಲವು ಕಥೆಗಳು ಇಂಗ್ಲಿಷ್, ಮಲೆಯಾಳಂ ಮುಂತಾದ ಭಾಷೆಗಳಿಗೆ ಅನುವಾದಗೊಂಡಿವೆ. ಕೆಲವು ಶ್ರೇಷ್ಠ ಕಥೆಗಳೆಂದು ಜನ ಮೆಚ್ಚಿಗೆ ಪಡೆದಿವೆ. ಪಿ.ಯು.ಸಿ.ಯಿಂದ ಪದವಿ ತರಗತಿವರೆಗೆ ಇವರ ಕಥೆಗಳು ಪಠ್ಯವಾಗಿವೆ. 'ಗರ್ಜನೆ' ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನ ಬಂದಿದೆ. ಅಲ್ಲದೆ ಇವರ ಕಥಾಸಂಕಲನಗಳು ಬೇರೆ ಬೇರೆ ಬಹುಮಾನಗಳನ್ನು, ಪ್ರಶಸ್ತಿಗಳನ್ನು ಪಡೆದುಕೊಂಡಿವೆ. ೧೯೬೫ರಲ್ಲಿ 'ಪ್ರಜಾವಾಣಿ ದೀಪಾವಳಿ ಕಥಾ ಸ್ಪರ್ಧೆ'ಯಲ್ಲಿ ಪ್ರಥಮ ಬಹುಮಾನ, ೧೯೬೮, ೧೯೭೨ರಲ್ಲಿ ಕಥಾಸಾಹಿತ್ಯ ವಿಭಾಗದಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಬಹುಮಾನಗಳು; ೧೯೭೪ರಲ್ಲಿ ಬಿಹಾರದ ಬಾಗಲ್ಪುರ ಜಿಲ್ಲೆಯಲ್ಲಿ 'ವಿಶ್ವ ಆರೋಗ್ಯ ಸಂಸ್ಥೆ'ಯಡಿಯಲ್ಲಿ ವಿಶೇಷ ಸೇವೆ ಸಲ್ಲಿಸಿದ್ದಕ್ಕಾಗಿ ಇವರಿಗೆ ಪ್ರಶಸ್ತಿ ಪತ್ರ ದೊರತಿದೆ. ೧೯೮೯ರಲ್ಲಿ 'ಒಂದು ಹುಡುಗನಿಗೆ ಬಿದ್ದ ಕನಸು' ಕಥಾಸಂಕಲನಕ್ಕೆ 'ಉದಯೋನ್ಮುಖ ವರ್ಧಮಾನ' ಪ್ರಶಸ್ತಿ ಲಭಿಸಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ, ಕನ್ನಡ ವಿಶ್ವವಿದ್ಯಾಲಯದ ಆಡಳಿತ ಮಂಡಳಿಯ ಸದಸ್ಯರಾಗಿ ಸಹ ಸೇವೆ ಸಲ್ಲಿಸಿದ್ದಾರೆ.

ಪ್ರಸ್ತುತ ರಾಮಣ್ಣ ಅವರು ಮಂಡ್ಯದ ಸರಕಾರಿ ಆಸ್ಪತ್ರೆಯಲ್ಲಿ ವೈದ್ಯಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಮಂಡ್ಯದ ತಮ್ಮ 'ನೆಲದ ಒಡಲು' ಮನೆಯಲ್ಲಿ ಹೆಂಡತಿ ರಾಜಮ್ಮ ಹಾಗೂ ಮಕ್ಕಳಾದ ರವಿಕಾಂತ ಗೌಡ ಮತ್ತು ಪೂರ್ಣಿಮಾರೊಂದಿಗೆ ನೆಲೆಸಿದ್ದಾರೆ. ವೈದ್ಯಾಧಿಕಾರಿಯಾಗಿ ಹೆಸರುಗಳಿಸಿದ ಇವರು ಲೇಖಕರಾಗಿ ಜನರ ಹೃದಯಗಳನ್ನು ತಲುಪಬೇಕೆನ್ನುವ ಮಹಾದಾಸೆಯನ್ನು ಹೃದಯದಲ್ಲಿ ತುಂಬಿ ಕೊಂಡಿದ್ದಾರೆ. ಜನರ ಬದುಕನ್ನು ಅತಿ ಸಮೀಪಕ್ಕೆ ಹೋಗಿ ಹೃದಯದಿಂದಲೇ ನೋಡುವ, ಬರೆಯುವ ಹಂಬಲ ಇವರದಾಗಿದೆ. ಆದಷ್ಟು ಕಡಿಮೆ ಬರೆದು, ಅದನ್ನು ಉನ್ನತ ಗುಣ ಮಟ್ಟದಲ್ಲೇ ಕಾಯ್ದುಕೊಳ್ಳುವ ಆಸೆ ಇಟ್ಟುಕೊಂಡಿದ್ದಾರೆ.

ಸ್ನೇಹಜೀವಿಯಾದ ರಾಮಣ್ಣನವರಿಗೆ ಎಲ್ಲರೂ ಸ್ನೇಹಿತರೆ. ಮನೆಗೆ ಬಂದವರೆಲ್ಲ ಬಂಧುಗಳೆ; ಅವರೊಂದಿಗೆ ಮಾತನಾಡುವುದೇ ಒಂದು ಖುಷಿ. ಅದ್ಭುತ ಭಾಷಣಕಾರರು. ಎಲ್ಲವನ್ನು ಹೃದಯದಿಂದಲೇ ಹೇಳುತ್ತಾರೆ. ನೀರಸ ಸಭೆಯೂ ಇವರ ಮಾತುಗಾರಿಕೆಯಿಂದ ರಸಮಯವಾಗುತ್ತದೆ. ಆ ಮಾತುಗಾರಿಕೆಗೆ ಜನರ ಮನಸ್ಸನ್ನು ಸೆರೆಹಿಡಿಯುವ ಅದ್ಭುತ ಮಾಂತ್ರಿಕ ಶಕ್ತಿ ಇದೆ. ಇವರ ಮಾತುಗಳನ್ನು ಕೇಳುವುದೇ ಒಂದು ಸಂತೋಷ. ರಾಮಣ್ಣನವರು ಸಭೆಯಲ್ಲಿರುವುದೇ ಒಂದು ಸೊಗಸು. "ಸಾಹಿತ್ಯದ ಓದು ಮನುಷ್ಯನಲ್ಲಿಯ ಮೃಗೀಯತೆಯನ್ನು ಕಳೆದು ಮನುಷ್ಯನನ್ನಾಗಿ ಮಾಡುತ್ತದೆ. ಮತ್ತು ನನ್ನಲ್ಲಿ ಪ್ರಾಮಾಣಿಕತೆ ಏನಾದರೂ ಇದ್ದಿದೇ ಆದರೆ ಅದು ಸಾಹಿತ್ಯದ ಓದಿನಿಂದ ಬಂದಿದ್ದು. ಅದು ನನ್ನನ್ನು ಮನುಷ್ಯನನ್ನಾಗಿ ಮಾಡಿ, ಈ ನೆಲದಲ್ಲಿ ಬದುಕಲು ಅವಕಾಶ ಮಾಡಿಕೊಟ್ಟಿದೆ" ಎಂದು ಹೇಳುತ್ತಾ ಸಾಹಿತ್ಯದ ಬಗೆಗಿನ ತಮ್ಮ ಅಪಾರ ಗೌರವ, ಅಭಿಮಾನ, ಶ್ರದ್ಧೆ, ಪ್ರೀತಿಯನ್ನು ಪ್ರಕಟಿಸುತ್ತಾರೆ.

# ಕಥಾಸಾಹಿತ್ಯ

ಡಾ. ಬೆಸಗರಹಳ್ಳಿ ರಾಮಣ್ಣನವರು ನಾಲ್ಕು ಕಥಾ ಸಂಕಲನಗಳನ್ನು, ಎರಡು ಕಾದಂಬರಿಗಳನ್ನು ಮತ್ತು ಒಂದು ಕವನ ಸಂಕಲನವನ್ನು ರಚಿಸಿದ್ದಾರೆ.

'ನೆಲದ ಒಡಲು' (೧೯೬೮) ಇವರ ಮೊಟ್ಟ ಮೊದಲ ಕಥಾ ಸಂಕಲನ. ಇದರಲ್ಲಿ ಒಟ್ಟು ಏಳು ಕಥೆಗಳಿವೆ. ಅವುಗಳೆಂದರೆ 'ಹಾವಿಲ್ಲದ ಹುತ್ತ', 'ಸೋಲು', 'ಮಳೆಗರೆಯಿತು ಬಾನು', 'ಮಹಾನವಮಿ', 'ನಂಜಿನ ಕೊನೆ', 'ದೇವರ ಹೂ'. ಈ ಕಥೆಗಳು 'ನಿರ್ಮಲ', 'ಸುಧಾ', ಮತ್ತು 'ಪ್ರಬುದ್ಧ ಕರ್ನಾಟಕ' ಪತ್ರಿಕೆಗಳಲ್ಲಿ ಪ್ರಕಟವಾಗಿದ್ದವು. ಇವುಗಳೆಲ್ಲವನ್ನು ಲೇಖಕರು ಒಟ್ಟಿಗೆ ಸೇರಿಸಿ 'ನೆಲದ ಒಡಲು' ಹೆಸರಿನಲ್ಲಿ (ವಿಶ್ವೇಶ್ವರ ಪ್ರಕಾಶನ) ಪ್ರಕಟಿಸಿದ್ದಾರೆ. ಇವರ ಅನುಭವ, ಬರವಣಿಗೆಯ ರೂಪಕ್ಕೆ ಬಂದು, ಕಥೆಗಳಾಗಿ ಮೂಡಿ ಬಂದಿವೆ. ಇಲ್ಲಿ ಬರುವ ಹಲವು ಕಥೆಗಳಲ್ಲಿ ಒಡೆದು ಹೋದ ಮನ, ಸ್ನೇಹ, ವ್ಯಕ್ತಿ, ಕುಟುಂಬ ಇವುಗಳು ಒಂದಾಗುವ ಸಹಜ ಚಿತ್ರಣಗಳನ್ನು ಕಾಣಬಹುದು.

'ಗರ್ಜನೆ' (೧೯೭೨) ಇವರ ಎರಡನೇ ಕಥಾಸಂಕಲನ. 'ನೆಲದ ಒಡಲು' ಬಂದ ನಾಲ್ಕು ವರ್ಷಗಳ ನಂತರ ಪ್ರಕಟವಾಯಿತು. ಇದರಲ್ಲಿ ಒಟ್ಟು ಒಂಬತ್ತು ಕಥೆಗಳಿವೆ. 'ಜ್ವಾಲೆಯ ನಡುವೆ', 'ಅಭಿಮಾನ', 'ಸ್ವಾರ್ಥ', 'ನೆಲದ ಉಸಿರು', 'ಕೆಂಪು ಹುಂಜ', ಮತ್ತು 'ಗರ್ಜನೆ', 'ಗರ್ಜನೆ'ಯ ಹೆಸರಿನಡಿಯಲ್ಲಿ (ಪ್ರಬುದ್ಧ ಪ್ರಕಾಶನ) ಪ್ರಕಟಗೊಂಡಿದೆ. ಇವರ ಮೊದಲ ಸಂಕಲನದ ಕಥೆಗಳಿಗಿಂತ ಇಲ್ಲಿಯ ಕಥೆಗಳು ಸಾಮಾಜಿಕವಾದ ರೂಪವನ್ನು ಪಡೆದುಕೊಂಡು ಭಿನ್ನವಾಗಿವೆ. ಇದಕ್ಕೆ 'ಜೀತ,' 'ಕಳೆ,' 'ಗರ್ಜನೆ' ಇವುಗಳು ಉತ್ತಮ ಉದಾಹರಣೆಗಳಾಗಿವೆ. ಇಲ್ಲೆಲ್ಲ ಪ್ರಕಟವಾಗುವ ಬಂಡಾಯ ಪ್ರಖರವಾಗಿದ್ದು, ವರ್ಣ-ವರ್ಗ ಸಂಘರ್ಷವು ಇಲ್ಲಿ ಮೌನವಾಗಿ ವ್ಯಕ್ತವಾಗುತ್ತದೆ.

'ಹರಕೆಯ ಹಣ' (೧೯೭೬) ಇವರ ಮೂರನೆಯ ಕಥಾ ಸಂಕಲನವಾಗಿದೆ. ಇದರಲ್ಲಿ 'ಹರಕೆಯ ಹಣ', 'ಗಾಂಧೀ ಸಂತಾನ', 'ಕಕರನ ಯುಗಾದಿ', 'ನರಳುಗಳು' ಮತ್ತು 'ಬಾವಿಗೆ ಬಿದ್ದದ್ದು ದೆವ್ವ' ಎಂಬ ಐದು ಕಥೆಗಳಿವೆ. ಈ ಸಂಕಲನವನ್ನು 'ನೆಲಮನೆ ಪ್ರಕಾಶನ' ದವರು ಪ್ರಕಟಿಸಿದ್ದಾರೆ. ಇಲ್ಲಿಯ ಕಥೆಗಳು ಗ್ರಾಮ್ಯಲೋಕದ ವಸ್ತುವನ್ನು ಒಳಗೊಂಡಿವೆ. ನಿರ್ದಿಷ್ಟ ಪ್ರಾದೇಶಿಕತೆಯ ಹಿನ್ನೆಲೆಯಲ್ಲೇ ಈ ಸಮಾಜದ ಬೃಹತ್

ಭಾಗದ ಬದುಕಿನ ಸ್ತರಗಳನ್ನು ಚಿತ್ರಿಸುವ ಕಥೆಗಳು ಇಲ್ಲಿವೆ. ಈ ಸಂಕಲನ ಕಥೆಗಾರರ ಶಕ್ತಿಯನ್ನು ಪ್ರತಿನಿಧಿಸುತ್ತದೆ. ಸಮಾಜದಲ್ಲಿ ಅಂತೆಯೇ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಲಕ್ಷ್ಯಕ್ಕೀಡಾದ ಜನಾಂಗದ ಬದುಕಿನ ವಿವಿಧ ಸ್ತರಗಳ ಸಾಂಸ್ಕೃತಿಕ ಶೋಷಣೆಯ ಸೂಕ್ಷ್ಮಗಳು ಅಭಿವ್ಯಕ್ತಿಗೊಂಡಿವೆ. ಹೊಸ ಶೈಲಿ (ಕಟಕಿ) ಯೊಂದರ ಅಳವಡಿಕೆಯನ್ನು ಗುರುತಿಸಬಹುದು. ಪಟ್ಟಭದ್ರರು ಹಾಗೂ ಅಧಿಕಾರಶಾಹಿಯ ನಡವಳಿಕೆ ಮತ್ತು ವ್ಯಕ್ತಿನಿಷ್ಠ ಪ್ರತಿಭಟನೆಯ ಇತಿಮಿತಿಗಳನ್ನು ಸಾಂಸ್ಕೃತಿಕ ಸಾಮಗ್ರಿಯ ಹಿನ್ನೆಲೆಯಲ್ಲಿ ಹಿಡಿದಿಟ್ಟಿದ್ದಾರೆ.

'ಒಂದು ಹುಡುಗನಿಗೆ ಬಿದ್ದ ಕನಸು' (೧೯೭೯) ಕಥೆಗಾರರ ಅನುಭವಗಳನ್ನು ಸಾಕಷ್ಟು ತುಂಬಿಕೊಂಡ ನಾಲ್ಕನೆಯ ಸಂಕಲನ. ಇದರಲ್ಲಿ 'ಶೂಲ', 'ಒಂದು ಹುಡುಗನಿಗೆ ಬಿದ್ದ ಕನಸು', 'ಗಾಂಧಿ', 'ಸಂತೆಯೊಳಗೊಂದು ಮನೆಯ ಮಾಡಿ', 'ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು', 'ಬೇಲ', 'ಚೆಲುವನ ಪರಂಗಿ ಗಿಡಗಳು', ಎಂಬ ಏಳು ಕಥೆಗಳಿವೆ. ಈ ಸಂಕಲನ 'ನೆಲಮನೆ ಪ್ರಕಾಶ'ನ ದಿಂದ ಪ್ರಕಟಗೊಂಡಿದೆ. ಇಲ್ಲಿನ ಸಾಕಷ್ಟು ಕಥೆಗಳಲ್ಲಿ ತುರ್ತು ಪರಿಸ್ಥಿತಿಯ ಘೋರ ವಾತಾವರಣ ನಡುಕ ಹುಟ್ಟಿಸುವ ರೀತಿಯಲ್ಲಿ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. ಸಂಕಲನದ ಕೆಲವು ಕಥೆಗಳಲ್ಲಿ ದೇಶದ ಹಲವು ಸಮಸ್ಯೆಗಳು ತೆರೆದುಕೊಂಡಿವೆ. ಇಲ್ಲಿ ಬರುವ 'ಶೂಲ' ಮತ್ತು 'ಬೇಲ' ಸ್ನೇಹಕ್ಕೆ ಸಂಬಂಧಿಸಿದ ಕಥೆಗಳು. 'ಬೇಲ'ದಲ್ಲಿ ಶೃಂಗಾರದ ನಿರ್ವಹಣೆ ಅಶ್ಲೀಲದ ದಡ ಮುಟ್ಟದಂತೆ ಮಧುರವಾಗಿ ಚಿತ್ರಿತವಾಗಿದೆ. ಬೇಲಾಳ ಸುಸಂಸ್ಕೃತ ಮನಸ್ಸನ್ನು ಆಕರ್ಷಕವಾಗಿ ಚಿತ್ರಿಸಿದ್ದಾರೆ.

'ನೆಲದ ಸಿರಿ' (೧೯೭೫) ಆಯ್ದ ಕಥಾಸಂಕಲನ. ಈ ಸಂಕಲನ 'ನೆಲಮನೆ ಪ್ರಕಾಶನ'ದಿಂದ ಪ್ರಕಟಗೊಂಡಿದೆ. ಇದರಲ್ಲಿ ಒಟ್ಟು ಹದಿನಾಲ್ಕು ಕಥೆಗಳಿವೆ. ಪದವಿ ತರಗತಿಗಾಗಿ ಆಯ್ದು ಸಿದ್ಧಪಡಿಸಿದ ಸಂಕಲನ ಇದಾಗಿದೆ. 'ಸುಗ್ಗಿ' (೧೯೯೧) ಇವರ ಇನ್ನೊಂದು ಆಯ್ದ ಕಥಾಸಂಕಲನ. ''ಸ್ನೇಹ ಪ್ರಕಾಶನ''ದಿಂದ ಪ್ರಕಟಗೊಂಡ ಇದರಲ್ಲಿ ಒಟ್ಟು ಹನ್ನೊಂದು ಕಥೆಗಳಿವೆ. ಈ ಸಂಕಲನವನ್ನು ಗ್ರಾಮೀಣ ಭಾರತದ ಕಥಾ ಸಾಮ್ರಾಟ, 'ಪ್ರೇಮಚಂದ'ರಿಗೆ ಅರ್ಪಿಸಿದ್ದಾರೆ. ಇದಕ್ಕೆ ಡಾ.ಕೆ.ವಿ. ನಾರಾಯಣ ಅವರು ಮುನ್ನುಡಿ ಬರೆದಿದ್ದಾರೆ.

ಇವರ ಐದನೇ ಕಥಾಸಂಕಲನವಾಗಿ 'ಕೊಳಲು ಮತ್ತು ಖಡ್ಗ' ಸದ್ಯದಲ್ಲಿಯೇ ಹೊರಬರಲಿದೆ. ಈ ಸಂಕಲನ ಬೆಂಗಳೂರಿನ ಕ್ರೈಸ್ತ ಕಾಲೇಜಿನಿಂದ ಪ್ರಕಟವಾಗಲಿದೆ. ಸಮಗ್ರ ಕಥಾಸಂಕಲನ 'ಕನ್ನಂಬಾಡಿ'ಯ ಏಳು ಕಥೆಗಳು ಮತ್ತು ಅನಂತರ ಬರೆದ ಹೊಸ ಕಥೆಗಳು ಸೇರಿ 'ಕೊಳಲು ಮತ್ತು ಖಡ್ಗ'ವಾಗಿದೆ. ಇಲ್ಲಿರುವ ಕಥೆಗಳು ಕೊಳಲಿನ ಮಧುರ ನಾದದಂತೆ ಮತ್ತು ಖಡ್ಗದಂತೆ ಹರಿತವಾಗಿಯೂ ಇರುವುದರಿಂದ 'ಕೊಳಲು

ಮತ್ತು ಖಡ್ಗ' ಎಂಬ ಹೆಸರನ್ನು ಇಡಲಾಗಿದೆ. ಆದರೆ ಈ ತಲೆಬರಹವನ್ನು ಹೊಂದಿದ ಕಥೆ ಈ ಕಥಾಸಂಕಲನದಲ್ಲಿ ಇಲ್ಲ.

'ಕನ್ನಂಬಾಡಿ' (೧೯೮೬) ಸಮಗ್ರ ಕಥಾಸಂಕಲನ. ಇವರು ೧೯೬೨ರಿಂದ ೧೯೮೫ ರವರೆಗೆ ಬರೆದ ಎಲ್ಲಾ ಕಥೆಗಳು ಇದರಲ್ಲಿ ಸೇರಿಕೊಂಡಿವೆ. ಆದರೆ ಈ ಅವಧಿಯಲ್ಲಿ ಬರೆದ ಅವರ ಉತ್ತಮ ಕಥೆಯಾದ "ಕಣಿವೆಯ ಅಂಚು" ಈ ಸಂಕಲನದಿಂದ ತಪ್ಪಿಸಿಕೊಂಡಿದೆ. ಈ ಸಂಕಲನದಲ್ಲಿ ಒಟ್ಟು ಮೂವತ್ತೈದು ಕಥೆಗಳಿವೆ. ಇದಕ್ಕೆ ವಿಮರ್ಶಕ ಶ್ರೀ ಕೆ. ಎಸ್. ಭಗವಾನರು ಉತ್ತಮ ಮುನ್ನುಡಿ ಬರೆದಿದ್ದಾರೆ.

'ರಕ್ತ ಕಣ್ಣೀರು' (೧೯೭೪) ಇವರ ಮೊದಲ ಕಾದಂಬರಿ, 'ಜನಪ್ರಗತಿ' ಪತ್ರಿಕೆಯಲ್ಲಿ ಧಾರವಾಹಿಯಾಗಿ ಪ್ರಕಟವಾಗಿದೆ. ವರ್ಗಸಂಘರ್ಷವೇ ಇಲ್ಲಿನ ವಸ್ತು. ಕುಖ್ಯಾತ ದರೋಡೆಕೋರ ಮಾನಸಿಂಗ ಮತ್ತು ತಲಪಿರಾಮರ ನಡುವಿನ ರಾಗದ್ವೇಷಗಳ ವಿವರ ಇಲ್ಲಿದೆ. ದರೋಡೆಕೋರನಲ್ಲಿಯೂ ಸಹ ಪ್ರೀತಿಯ ಸೆಲೆಯನ್ನು ಲೇಖಕರು ಕಾದಂಬರಿಯಲ್ಲಿ ಮೂಡಿಸಿದ್ದಾರೆ. ಇವರ ಭಾಷಾ ಪ್ರಯೋಗ, ಘಟನೆಗಳ ನಿರೂಪಣೆ, ಪಾತ್ರಗಳ ಚಿತ್ರಣ ಓದುಗನ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿಯುತ್ತವೆ.

'ತೋಳಗಳ ನಡುವೆ' ಇವರ ಇನ್ನೊಂದು ಕಾದಂಬರಿ. 'ಅಭಿವ್ಯಕ್ತಿ ಪ್ರಕಾಶನ'ದಿಂದ ಪ್ರಕಟಗೊಂಡಿದೆ. ಇಲ್ಲಿಯ ವಸ್ತು ವರ್ಗಸಂಘರ್ಷವಾಗಿದೆ. ಹರಿಜನ ಮತ್ತು ಲಿಂಗಾಯತ ಹುಡುಗರ ನಡುವೆ ನಡೆದ ಸಾಮಾನ್ಯ ಜಗಳವನ್ನೇ ಆ ಊರಿನ ಪುಢಾರಿ ವೆಂಕಟೇಗೌಡ ತನ್ನ ರಾಜಕೀಯ ಲಾಭಕ್ಕೆ ಬಳಸಿಕೊಂಡು, ಜಾತಿ ಜಾತಿಗಳ ನಡುವೆ ಜಗಳ ತಂದು ಹಾಕುತ್ತಾನೆ. ಈ ಮೋಸ ಊರಿನ ಮುಗ್ಧ ಜನರಿಗೆ ಹೇಗೋ ತಿಳಿದುಬಿಡುತ್ತದೆ. ಕೊನೆಗೆ ಪುಢಾರಿ ತನ್ನ ಮೋಸದ ಜಾಲಕ್ಕೆ ತಾನೇ ಬಲಿಯಾಗುವುದು ಇಲ್ಲಿ ಚಿತ್ರಿತವಾಗಿದೆ. ಇತರರಿಗೆ ಕೆಟ್ಟದ್ದನ್ನು (ಮುಗ್ಧ ಜನರಿಗೆ) ಬಯಸಿ, ಅವರ ಬದುಕಿನಲ್ಲಿ ಬಿರುಗಾಳಿ ಎಬ್ಬಿಸಿದರೆ, ಆ ಬಿರುಗಾಳಿಯ ಸುಳಿಯಲ್ಲಿ ತಾನೇ ಹೇಗೆ ಸಿಕ್ಕಿಬಿಡುತ್ತಾನೆಂಬ ಲೇಖಕರ ಆಶಯ ಕಾದಂಬರಿಯಲ್ಲಿ ಮಾರ್ಮಿಕವಾಗಿ ನಿರೂಪಿತವಾಗಿದೆ.

'ಶೋಕಚಕ್ರ' (೧೯೯೦) ಇವರ ಮೊಟ್ಟ ಮೊದಲ ಕವನ ಸಂಕಲನ. ಕಥೆಗಾರರೆಂದು ಗುರುತಿಸಿಕೊಂಡ ರಾಮಣ್ಣ ಉತ್ತಮ ಕವಿಯೂ ಹೌದು. ಇದಕ್ಕೆ ಇವರ 'ಶೋಕಚಕ್ರ', ಸಾಕ್ಷಿಯಾಗಿದೆ. ಇದರಲ್ಲಿ ಇಪ್ಪತ್ತೆಂಟು ಕವನಗಳಿದ್ದು, ಪ್ರತಿಯೊಂದು ಕವನಗಳಲ್ಲೂ, ಸರಳ, ಸುಂದರ, ನೇರವಾದ ಭಾಷೆಯಲ್ಲಿ ಭಾವನೆಗಳಿಗೆ ಮೂರ್ತ ಸ್ವರೂಪ ಕೊಟ್ಟಿದ್ದಾರೆ. ಇವರ ಕವನಗಳಲ್ಲಿ ರಾಜಕೀಯ, ಸಾಹಿತ್ಯ, ಪ್ರೀತಿ, ದೇಶಪ್ರೇಮ, ವ್ಯಕ್ತಿ ಚಿತ್ರಣ, ಸಂಸ್ಕೃತಿ ದರ್ಶನ, ಪ್ರಕೃತಿ ಚಿತ್ರಣ ಮತ್ತು ದಲಿತ ವರ್ಗದ ಶೋಷಣೆ, ನೋವು ನಲಿವುಗಳು ಅಡಕವಾಗಿವೆ.

# ಸಾಹಿತ್ಯ ವಿಮರ್ಶೆ

## ಕನ್ನಂಬಾಡಿ

ಡಾ. ಬೆಸಗರಹಳ್ಳಿ ರಾಮಣ್ಣನವರು ವೃತ್ತಿಯಲ್ಲಿ ವೈದ್ಯರಾಗಿದ್ದರೂ, ಚಿಕ್ಕಂದಿನಿಂದಲೂ ಸಾಹಿತ್ಯದ ಒಲವು ಇವರ ಹೃದಯದಲ್ಲಿ ಅಡಗಿತ್ತು. ಇದರಿಂದ ಇವರು ಕನ್ನಡದ ಶಕ್ತಿಶಾಲಿ ಕಥೆಗಾರರಲ್ಲಿ ಒಬ್ಬರಾದರು. ಇವರ ಕಥೆಗಳು ನಾಡಿನ ಅನೇಕ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು, ಇನ್ನೂ ಕೆಲವು ಕಥೆಗಳು ಇಂಗ್ಲಿಷ್, ಮಲೆಯಾಳಂ ಭಾಷೆಗೆ ಭಾಷಾಂತರಗೊಂಡು, ನಾಡಿನ ಅನೇಕ ವಿದ್ವಾಂಸರು ಮೆಚ್ಚಿಕೊಂಡಿದ್ದರೂ ಇವರ ಕೃತಿಗಳಿಗೆ ವಿಮರ್ಶೆ ಸರಿಯಾಗಿ ಬಂದಿಲ್ಲ.

ಇವರು ಕಥೆಗಾರರಾಗಿ, ಕಾದಂಬರಿಕಾರರಾಗಿ ಮತ್ತು ಕವಿಯಾಗಿ ಕನ್ನಡ ಸಾಹಿತ್ಯಕ್ಕೆ ಸೇವೆಸಲ್ಲಿಸಿದ್ದಾರೆ. ಇಂಥ ಒಬ್ಬ ಕನ್ನಡದ ಗುಡಿಯಲ್ಲಿ ವಿಮರ್ಶೆಯ ಅಗ್ರಪಂಕ್ತಿಗೆ ನಿಲ್ಲುವ ಸಾಹಿತಿಯನ್ನು ಗುರುತಿಸದೇ ಇರುವುದು ದುರಂತ. ಇವರು ಕಥೆ ಬರೆಯುವುದನ್ನು ಆರಂಭಿಸಿದಾಗ ಕನ್ನಡ ಕಥಾಸಾಹಿತ್ಯ ಆಗಲೇ ಶ್ರೀಮಂತಗೊಂಡಿತ್ತು. ಜೀಶಂಪ, ಲಂಕೇಶ, ಸುಧಾಕರ, ಅನಂತಮೂರ್ತಿ, ಕೆ. ಸದಾಶಿವ, ತರಾಸು ಮತ್ತು ಚದುರಂಗರ ಕಥಾಸಾಹಿತ್ಯದ ನಡುವೆಯೂ ಇವರ ಕಥಾಸಾಹಿತ್ಯ ಜನಮೆಚ್ಚುಗೆಯನ್ನು ಪಡೆದಿರುವುದು ಇವರಿಗಿರುವ ಪ್ರತಿಭೆ ಮತ್ತು ಸಾಹಿತ್ಯಕ ಒಲವುಗಳಿಗೆ ದ್ಯೋತಕವಾಗಿವೆ.

ಇವರ ಸಾಹಿತ್ಯ ಕಂಡು ಅನುಭವಿಸಿದ ಮತ್ತು ಕೇಳಿದ ಘಟನೆಗಳಿಂದ ರೂಪಿತವಾದವು. ಮೂಲ ಗ್ರಾಮೀಣ ಸಂಸ್ಕೃತಿಯ ಭಾಷೆಯಲ್ಲಿ ವಾಸ್ತವಿಕ ಮೌಲ್ಯಗಳನ್ನು, ಕಟುಸತ್ಯವನ್ನು ಹೇಳುವಲ್ಲಿ ಯಶಸ್ವಿಯಾಗಿದ್ದಾರೆ. ವಸ್ತು, ಭಾಷೆಯಲ್ಲಿ ತಮ್ಮದೇ ಆದ ತಂತ್ರಗಾರಿಕೆ ಇದ್ದು, ಪಾತ್ರ, ಘಟನೆ, ವರ್ಣನೆಗಳನ್ನು ಬೇರ್ಪಡಿಸಲಾರದಷ್ಟರ ಮಟ್ಟಿಗೆ ಮೂರ್ತಗೊಳಿಸುವ ಕಲೆಗಾರಿಕೆ ಇವರಿಗೆ ಸಿದ್ಧಿಸಿದೆ. 'ಕನ್ನಂಬಾಡಿ'ಯ ಮುನ್ನುಡಿಯಲ್ಲಿ ಶ್ರೀ ಕೆ.ಎಸ್. ಭಗವಾನರು ಇವರ ಕಥೆಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಿದ್ದಾರೆ:

೧. ಪುನಸ್ಸಮಾಗಮದ ಕಥೆಗಳು
೨. ರಾಷ್ಟ್ರೀಯ ಸಮಸ್ಯೆಗಳನ್ನೊಳಗೊಂಡ ಕಥೆಗಳು
೩. ದಲಿತ ಬದುಕಿನ ಕಥೆಗಳು

'ಸುಗ್ಗಿ', 'ಮಳೆಗರೆಯ ಬಾನು', 'ದೇವರ ಹೂ', 'ನೆಲದ ಉಸಿರು' ಇವು ಮೊದಲ ಗುಂಪಿಗೆ ಸೇರಿದ ಕಥೆಗಳು. ಈ ಕಥೆಗಳಲ್ಲಿ ಒಡೆದ ಮನಸ್ಸು, ಬಿರುಕುಬಿಟ್ಟ ಸ್ನೇಹ, ಮುರಿದ ಮನೆ, ಮತ್ತೆ ಒಂದಾಗುವ ಸಹಜ ಚಿತ್ರಣವಿದೆ. 'ಮಹಾನವಮಿ', 'ಜ್ವಾಲೆಯ ನಡುವೆ', 'ಒಂದು ಹುಡುಗನಿಗೆ ಬಿದ್ದ ಕನಸು', 'ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು' ಇವು ಎರಡನೇ ಗುಂಪಿಗೆ ಸೇರುತ್ತವೆ. ಈ ಕಥೆಗಳಲ್ಲಿ ದೇಶದ ಹಲವು ಸಮಸ್ಯೆಗಳು ತೆರೆದುಕೊಂಡಿವೆ. 'ಜೀತ', 'ಕಳೆ', 'ಅಭಿಮಾನ', 'ಕೆಂಪು ಹುಂಜ,' 'ಗರ್ಜನೆ', 'ಹರಕೆಯ ಹಣ', 'ಗಾಂಧಿ ಸಂತಾನ', 'ಕಕರನ ಯುಗಾದಿ', 'ಗಾಂಧಿ', 'ಸಂತೆಯೊಳಗೊಂದು ಮನೆಯ ಮಾಡಿ', 'ಚೆಲುವನ ಪರಂಗಿ ಗಿಡಗಳು' ಇವು ಕೊನೆಯ ಗುಂಪಿಗೆ ಸೇರುವ ಕಥೆಗಳು. ದಲಿತ ಬದುಕನ್ನು ಕುರಿತು ಇಷ್ಟೊಂದು ಕತೆಗಳನ್ನು ಬರೆದಿರುವ ದಲಿತೇತರ ಲೇಖಕರಿಲ್ಲ ಎನ್ನಬಹುದು. ಈ ಕಥೆಗಳಲ್ಲಿ ದಲಿತ ಜೀವನ ಸಾಕಷ್ಟು ವಿವರ ವಿವರವಾಗಿ ವಿವಿಧ ಮಗ್ಗುಲುಗಳಿಂದ ವರ್ಣಮಯವಾಗಿ, ರಾಗೋಜ್ವಲತೆಯಿಂದ ಕೃತಿಗೊಂಡಿದೆ. ಗ್ರಾಮಾಂತರ ಪ್ರದೇಶದಲ್ಲಿ ದಲಿತರ ಬದುಕು ಪರಿವರ್ತನೆಗೆ ಒಳಗಾಗಿರುವುದನ್ನು ಈ ಕಥೆಗಳು ದಾಖಲಿಸುತ್ತವೆ.

ಲೇಖಕರ ಮೊದಲ ಕಥಾಸಂಕಲನ 'ನೆಲದ ಒಡಲು'. ಇದರಲ್ಲಿನ 'ಸುಗ್ಗಿ' 'ಮಳೆಗರೆಯಿತು ಬಾನು', 'ದೇವರ ಹೂ', 'ನೆಲದ ಉಸಿರು' ಈ ಕಥೆಗಳಲ್ಲಿ ಒಡೆದು ಹೋದ ಮನಸ್ಸು, ಸ್ನೇಹ, ವ್ಯಕ್ತಿ, ಮನೆ, ಕುಟುಂಬ ಇವಗಳೆಲ್ಲ ಒಂದಾಗುವ ಸಹಜ ಚಿತ್ರಣವಿದೆ. ಇವರು ಹುಟ್ಟಿ ಬೆಳೆದ ಹಳ್ಳಿಯ ಪರಿಸರವೇ ಕಥೆಗಳಲ್ಲಿ ಬರುತ್ತವೆ. ಯು. ಆರ್. ಅನಂತಮೂರ್ತಿಯವರ ಮಾತಿನಲ್ಲಿ ಹೇಳುವುದಾದರೆ, 'ನೆಲದ ಒಡಲು' ಸಂಕಲನದ ಕಥೆಗಳು "ಮನುಷ್ಯನ ಔದಾರ್ಯ ಅವರ ಸಣ್ಣತನವನ್ನು ಮೀರಿ ಗೆದ್ದು ನಿಲ್ಲುವ ಸಂದರ್ಭದಲ್ಲೆಲ್ಲ ಪ್ರಕೃತಿಯ ಪರವಾಗಿ ಬರುವ ಮಳೆಯಾಗಲಿ ಒಕ್ಕಲು ಮಕ್ಕಳು ನಂಬುವ ಗ್ರಾಮದೈವವಾಗಲಿ, ದುಡಿಮೆಯ ಫಲವಾದ ಪೈರಾಗಲಿ ಸಾಕ್ಷಿಯಾಗಿ ನಿಲ್ಲುವುದು ಸಮಷ್ಟಿ ಪ್ರಜ್ಞೆ ಇನ್ನೂ ಜಾಗೃತವಾಗಿರುವ ಗ್ರಾಮ ಸಮಾಜದಿಂದ ಬಂದ ಕಥೆಗಳಿವು ಎಂಬುದಕ್ಕೆ ದ್ಯೋತಕವಾಗಿದೆ." ('ನೆಲದ ಒಡಲು' ಕೃತಿಯ ಬೆನ್ನುಡಿ.)

'ಸುಗ್ಗಿ' ಕಥೆಗೆ ಕೌಟುಂಬಿಕ ಕಲಹವೇ ಕಥಾವಸ್ತು, ಇನ್ನೊಬ್ಬರ ಚಾಡಿ ಮಾತನ್ನು ಕೇಳಿ, ಸುಖವಾಗಿ ಒಟ್ಟಿಗೆ ಬದುಕುತ್ತಿದ್ದ ಸಂಸಾರವೊಂದು, ಒಡೆದು ಹೋಗುವ ಸ್ಥಿತಿಗೆ ತಲುಪಿ, ಮತ್ತೆ ಸ್ವಪ್ರಜ್ಞೆಯಿಂದ ಜಾಗೃತಗೊಳ್ಳುತ್ತದೆ. ಕೆಂಪಣ್ಣನ ಚಾಡಿ ಮಾತಿಗೆ ಬಲಿಯಾಗಿ ಪುಟ್ಟಸ್ವಾಮಿ, ಅಣ್ಣ ಶಿವರಾಮನನ್ನು ಆಸ್ತಿಯಲ್ಲಿ ಪಾಲು ಕೇಳುತ್ತಾನೆ. ಇದರಿಂದ ಅಣ್ಣ ತಮ್ಮಂದಿರ ನಡುವೆ ವೈಮನಸ್ಸು ಉಂಟಾಗುತ್ತದೆ. ಮಕ್ಕಳ ವೈಮನಸ್ಸು ತಾಯಿಗೆ ಸಹಿಸದಷ್ಟು ದು:ಖವಾಗುತ್ತದೆ. ಅಣ್ಣನಿಗೆ ತಮ್ಮನ ಅಗಲುವಿಕೆ

ನುಂಗಲಾರದ ತುತ್ತಾಗುತ್ತದೆ. ಕೊನೆಗೆ ಸ್ವಬುದ್ಧಿಯಿಂದ ತನ್ನ ತಪ್ಪನ್ನರಿತು ಅಣ್ಣನಲ್ಲಿ ಕ್ಷಮೆ ಕೇಳುತ್ತಾನೆ. ಅಣ್ಣ ತಮ್ಮಂದಿರನ್ನು ಬಿಟ್ಟಿರಲಾರದ ಬಾಂಧವ್ಯ, ಅಣ್ಣನ ಮಕ್ಕಳ ಒಡನಾಟ, ತಾಯಿಯ ದು:ಖ,ತಾನು ಪಾಲು ಕೇಳುವುದರಿಂದ ಅಣ್ಣ ಪಡುವ ಸಂಕಟ ಇವೇ ಪುಟ್ಟಸ್ವಾಮಿಯನ್ನು ಸರಿದಾರಿಗೆ ತರುವಲ್ಲಿ ನೆರವಾದವು. ಕೆ.ವಿ. ನಾರಾಯಣರ ಮಾತಿನಲ್ಲಿ ಹೇಳುವುದಾದರೆ, "ಫಲವಂತಿಕೆಯ ವಿವರವಾಗಿ ಬರುವ ತಾಯಿ ಹಾಗೂ ಬೆಳೆಸು, ಆಚರಣೆಯಾಗಿ ಬರುವ ಧಾನ್ಯದ ಪೂಜೆ, ಹಾಡುಗಳು ಕಥೆಗೆ ವರ್ತಮಾನ ಮೀರುವ ಶಕ್ತಿಯನ್ನು ಒದಗಿಸುತ್ತವೆ. ಒಡೆದ ಮನಗಳು, ಒಡೆಯಲಿದ್ದ ಮನೆಗಳು ಒಂದಾಗುವುದು, ಸರೋಜಳಿಗೆ ಮಗು ಜನಿಸುವುದು ಕಥೆಯ ಕೊನೆಯ ತಿರುಳಾಗಿ ಬರುವುದರ ಮೂಲಕ ಒಟ್ಟು ಮಾನವ ವರ್ತನೆಗಳ ಸ್ಥಾಯಿ ಹಾಗೂ ಸಂಚಾರಿಗಳ ಮೂಲಕ ವ್ಯಾಖ್ಯೆಗೆ ನೆರವಾಗುವಂತಿವೆ." ('ಸುಗ್ಗಿ' ಮುನ್ನುಡಿ) ಕೇವಲ ಸಣ್ಣ ಕಾರಣಗಳಿಗಾಗಿ ಒಡೆಯಲಿದ್ದ ಮನೆಯೊಂದು ಪ್ರೀತಿ, ಸಹನೆ, ತ್ಯಾಗ, ತಿಳುವಳಿಕೆಗಳಿಂದ ಮತ್ತೆ ಒಂದಾಗುವುದನ್ನು ಈ ಕಥೆ ತಿಳಿಸುತ್ತದೆ.

ರೈತ ಮಕ್ಕಳು ಭೂಮಿಯನ್ನು ಪ್ರೀತಿಸುವ ಬಗೆಯನ್ನು ಲೇಖಕರು ಕೊಟ್ಟ ಜನಪದ ಗೀತೆ, ಕಥೆಗೆ ಘನತೆಯನ್ನು ಹೆಚ್ಚಿಸುತ್ತದೆ.

"ಭೂತಾಯಿ ಕೊಟ್ಟಳು ಬತ್ತವ
ಕಣಜದ ತುಂಬ ತುಂಬೇವು
ಹೊಸ ಬೆಳೆಯ ಅನ್ನಾವ ಮಾಡಿ
ಮನೆಯಲ್ಲಿ ಉಂಡು ನಲಿದೇವು – ಸುಗ್ಗಿಯ ನೆನೆದೇವು
....... ನೆನೆದೇವು ಸುಗ್ಗಿಯ"

ತುಂಬಿದ ಮನೆ ಒಡೆಯದಂತೆ ನಮ್ಮನ್ನು ಕಾಪಾಡು ಎಂದು ದೇವಿಯಲ್ಲಿ ಬೇಡಿ, ಕಣದಲ್ಲಿ ಬತ್ತವನ್ನು ಹೆಚ್ಚಿಸು ಎಂದು ಅವಳನ್ನು ಆರಾಧಿಸುವ ಈ ಹಾಡನ್ನು ನೋಡಬಹುದು.

"ನಮ್ಮೂರ ಕಾಯೋಳೆ ನಮ್ಮವ್ವ
ಎಲ್ಲವ್ವ ನಂಮನೆ ಒಂದಾಗಿ ಇರಸವ್ವ
ನಂಮನೆ ಕಣಜ ಹಿಗ್ಗಲವ್ವ"

ಕ್ಷುಲ್ಲಕ ಕಾರಣಗಳಿಗಾಗಿ ಜಗಳ ಕಾಯುವುದು ಹಳ್ಳಿಯ ಬದುಕಿನಲ್ಲಿ ಸಾಮಾನ್ಯ. ಕೋಪ ತಿಳಿಯಾದಾಗ ಹಿಂದಿನದನ್ನೆಲ್ಲವನ್ನೂ ಮರೆತು ಒಂದಾಗುವುದು ಸಹಜ. ಇದು

'ದೇವರ ಹೂ' ಕಥೆಯ ವಸ್ತು. ರುದ್ರಮ್ಮ ದೇವರ ಪೂಜೆಗಾಗಿ ತೋಟದಿಂದ ಹೂ ಕಿತ್ತಿದ್ದಕ್ಕಾಗಿ ಚನ್ನಕ್ಕ ಕಾಲ್ಕೆರೆದು ಜಗಳಕ್ಕೆ ನಿಂತಳು. ಇದಕ್ಕಾಗಿ ಪಂಚಾಯ್ತಿ ಸೇರಿ ನ್ಯಾಯ ತೀರ್ಮಾನವಾಗಬೇಕಾಯ್ತು. ತೀರ್ಪಿನಂತೆ ಊರ ಮುಂದಿನ ಬಸವಣ್ಣನ ಗುಡಿಗೆ ಇಬ್ಬರೂ ಏಳು ದಿನ ದೀಪ ಹಚ್ಚುವುದು, ಏಳನೆಯ ದಿನ ದೀಪ ಹಚ್ಚಿ ಚನ್ನಕ್ಕ ಮತ್ತು ರುದ್ರಮ್ಮ ಪರಸ್ಪರ ಪ್ರೀತಿಯನ್ನು ಕಾಕತಾಳೀಯವೆಂಬಂತೆ ವ್ಯಕ್ತಪಡಿಸಿದರು. ವೈಜ್ಞಾನಿಕ ಯುಗದಲ್ಲಿ ಕೂಡ ಗ್ರಾಮೀಣ ಜನರ ಬದುಕಿನಲ್ಲಿ ನಂಬಿಕೆಗಳು ಹಾಸು ಹೊಕ್ಕಾಗಿವೆ ಎಂಬುದು ಈ ಕಥೆಯಲ್ಲಿ ಚಿತ್ರಿತವಾಗಿವೆ. ಪ್ರೀತಿ, ಸಹನೆ, ತ್ಯಾಗ, ಅರಿವು, ವೈಷಮ್ಯವನ್ನು ಮರೆತು ಬಾಳುವುದು ಸಾಧ್ಯ ಎಂಬುದನ್ನು ಈ ಕಥೆ ತೋರಿಸಿ ಕೊಟ್ಟಿದೆ.

'ಮಳೆಗರೆಯಿತು ಬಾನು' ಇದರ ಕಥಾವಸ್ತು, ಅಣ್ಣ ತಮ್ಮಂದಿರಂತೆ ಇದ್ದ ಇಬ್ಬರು ಗೆಳೆಯರು ಸಣ್ಣ ಕಾರಣವನ್ನೇ ದೊಡ್ಡದನ್ನಾಗಿಸಿಕೊಂಡು ಕಿತ್ತಾಡಿ ಮತ್ತೆ ಒಂದಾಗುವುದು. ಗದ್ದೆಯ ನೀರಿಗಾಗಿ ಸಣ್ಣ ಮತ್ತು ಪುಟ್ಟರಾಮರು ವೈಷಮ್ಯ ಬೆಳೆಸಿಕೊಳ್ಳುತ್ತಾರೆ. ಚಾಡಿ ಮಾತನ್ನು ಕೇಳಿ ಬೇರೆ ಬೇರೆ ರಾಜಕೀಯ ವ್ಯಕ್ತಿಗಳೊಡನೆ ಸೇರಿ ದೂರವಾಗುತ್ತಾರೆ. ಮಳೆಯಿಂದ ಪುಟ್ಟರಾಮನ ಪೈರು ಮುಳುಗಿ ಹೋಗುತ್ತಿದ್ದಾಗ ಸುಮ್ಮನಿರುವುದು ಸಣ್ಣನಿಂದ ಆಗಲಿಲ್ಲ. ದೂರಾದ ಇಬ್ಬರೂ ಒಂದಾದರು. "ಕೋಪದಲ್ಲಾಡಿದ ಮಾತು ಮನೆ ಮುರಿತದೆ" ಎಂಬ ವಾಸ್ತವ ಸತ್ಯವನ್ನು ಈ ವ್ಯಕ್ತಿಗಳು ತಿಳಿದುಕೊಳ್ಳುತ್ತಾರೆ. ವೈಯಕ್ತಿಕ ಬದುಕಿನಲ್ಲಿ ರಾಜಕೀಯದ ಪ್ರಭಾವವಾದರೂ ಅದು ಶಾಶ್ವತವಾಗಿ ನಿಲ್ಲದೆ, ಮಾನವ ಸಂಬಂಧಗಳೇ ಶ್ರೇಷ್ಠವೆಂಬ ಮುಖ್ಯ ಆಶಯ ಈ ಕಥೆಯಲ್ಲಿ ನಿರೂಪಿತವಾಗಿದೆ. ಪಾತ್ರಗಳು ವೈಷಮ್ಯವನ್ನು ಮರೆತು ಪುನ: ಒಂದಾಗುವುದು, "ಮುಗಿಲ ಪರದೆಯು ಮುಸಕನ್ನು ಮೀಟಿದ ದೃಷ್ಟಿಗಳು ಒಂದಷ್ಟು ಕ್ಷಣಗಳು ಅಂಟಿಕೊಂಡವು" ಎಂಬುದನ್ನು ಕಥೆಗಾರರು ಕಲಾತ್ಮಕವಾಗಿ ಅಭಿವ್ಯಕ್ತಿಸಿದ್ದಾರೆ.

'ನೆಲದ ಉಸಿರು' ಕಥೆಯಲ್ಲಿ ಮನುಷ್ಯ ಹೇಗೆ ಪರಿಸರ ಸಂಬಂಧವನ್ನು ಗಾಢವಾಗಿ ಮೈಗೂಡಿಸಿಕೊಂಡಿರುತ್ತಾನೆ ಎನ್ನುವುದನ್ನು ತಿಳಿಸುತ್ತದೆ. ತಾನು ಹುಟ್ಟಿ ಬೆಳೆದ ನೆಲ, ಮನೆ, ಹೆತ್ತತಾಯಿ, ತಂದೆ, ಇವೆಲ್ಲದರ ಸಂಬಂಧವನ್ನು ಬಿಟ್ಟು ವೆಂಕಟೇಶ ಗೌಡರಿಗೆ ಬಾಳಲು ಸಾಧ್ಯವಿಲ್ಲದಾಗುತ್ತದೆ. ಗೌಡರಿಗೆ, ಮಗ ರಮೇಶ ಆಸ್ತಿಯನ್ನು ಪಾಲು ಮಾಡಿ, ಮೈಸೂರಿನಲ್ಲಿಯೇ ತಾಯಿ ಸಮೇತ ತನ್ನ ಮನೆಯಲ್ಲಿ ಬಂದಿರುವಂತೆ ಹೇಳಿದ. ಹಾಗೆ ಬಾರದಿದ್ದರೆ, ಮಹಾನವಮಿ ಹಬ್ಬಕ್ಕೆ ಬರುವುದಿಲ್ಲವೆಂದು ಖಂಡಿತವಾಗಿ ಹೇಳಿದ್ದ. ಇದು ವೆಂಕಟೇಶ ಗೌಡರಿಗೆ ನುಂಗಲಾರದ ತುತ್ತಾಗಿ, ಒಂದೆಡೆ ಊರಿನ ಸಂಬಂಧ ಬಿಡಲಾರದೆ, ಇನ್ನೊಂದೆಡೆ ಮಗನ ಸಂಬಂಧವನ್ನು ಬಿಡಲಾರದೆ ಧರ್ಮಸಂಕಟಕ್ಕೆ ಸಿಕ್ಕಿಹಾಕಿಕೊಳ್ಳುತ್ತಾರೆ. ಊರಿಗೆ ಬರುವುದೇ ಇಲ್ಲವೆಂದ ಮಗ

ಹಬ್ಬಕ್ಕೆ ಹೆಂಡತಿ ಮಕ್ಕಳೊಡನೆ ಮತ್ತೆ ಮನೆಗೆ ಬಂದಾಗ ಗೌಡರಿಗೆ ಮೊದಲಿನ ಉತ್ಸಾಹ ಮೂಡಿತು. ಆಧುನಿಕ ಸಂಸ್ಕೃತಿ ಮತ್ತು ಗ್ರಾಮೀಣ ಸಂಸ್ಕೃತಿಗಳೆರಡರ ಸಂಘರ್ಷವು ಪಾತ್ರಗಳಲ್ಲಿ ನಡೆದು, ರಕ್ತಗತವಾಗಿರುವ ಗ್ರಾಮೀಣ ಸಂಸ್ಕೃತಿಯನ್ನು ಒಪ್ಪಿಕೊಳ್ಳುವುದರ ಮೂಲಕ ಲೇಖಕರು ಮಾನವ ಸಂಬಂಧ ಮತ್ತು ಊರಿನ ನಂಟುಗಳಿಗೆ ಬೆಲೆ ಕೊಡುವುದನ್ನು ನೋಡಬಹುದು. ಮಗನ ಮೇಲಿರುವ ವಾತ್ಸಲ್ಯ ಮತ್ತು ಅದರ ಹಿರಿಮೆಯನ್ನು ಇಲ್ಲಿ ಕಾಣಬಹುದು.

ಒಟ್ಟಾರೆಯಾಗಿ ಈ ಕಥೆಗಳಲ್ಲಿ ಸಂಬಂಧವನ್ನು ಕೆಡಲು ಅನೇಕ ಕಾರಣಗಳಿರುವುದು ಕಂಡು ಬರುತ್ತದೆ. ಆದರೆ ಒಡೆದು ಹೋದ ಸಂಬಂಧಗಳು ಒಂದಾಗುವುದಕ್ಕೆ ಮಾನವೀಯ ಅಂತ:ಕರಣವೊಂದೇ ಒಂದು ಸಾಕೆಂಬುದನ್ನು ತಿಳಿಸುತ್ತವೆ. ಇಲ್ಲಿಯ ಕಥೆಗಳೆಲ್ಲಾ ಭಾವನಾತ್ಮಕವಾಗಿದ್ದು, ಭಾವನೆಗಳ ಉದ್ವೇಗದಲ್ಲಿ ಉಂಟಾದ ಕಲಹ, ವೈಮನಸ್ಸುಗಳು ತಿಳಿಯಾದಾಗ ಪುನ: ಪಾತ್ರಗಳು ಒಂದಾಗುವುದನ್ನು ಕಾಣುತ್ತೇವೆ. ಡಾ. ಕರೀಗೌಡರ ಮಾತಿನಲ್ಲಿ ಹೇಳುವುದಾದರೆ, "ನಿಸರ್ಗದ ಅವಿಭಾಜ್ಯ ಅಂಗವಾದ ಒಕ್ಕಲು ಮಕ್ಕಳ ನಿತ್ಯಜೀವನದ ಸುಖದು:ಖ, ಸಣ್ಣತನ, ಅಸೂಯೆ, ಔದಾರ್ಯ ಇವುಗಳನ್ನು ಕಥೆಗಾರರು ತಮ್ಮ ದಟ್ಟವಾದ ಅನುಭವದಿಂದ ಸಹಜವಾಗಿ ಚಿತ್ರಿಸುತ್ತಾರೆ. ನಿಸರ್ಗ ಇವರ ಕಥೆಗಳಲ್ಲಿ ಒಂದು ಪರಿಸರವಲ್ಲ, ನಿತ್ಯ ದುಡಿಮೆಯಲ್ಲಿ ಭಾಗಿಯಾಗಿ, ವ್ಯಕ್ತಿ ಪ್ರಜ್ಞೆಯಲ್ಲಿ ಮಿಳಿತವಾಗಿ ಒಂದು ಪಾತ್ರವಾಗಿ ಬರುತ್ತದೆ" (ಕರೀಗೌಡ ಬೀಚನಹಳ್ಳಿ ೧೯೯೧ – ಪು ೧೯೮). ಹಾ.ಮಾ. ನಾಯಕರು 'ನೆಲದ ಒಡಲು' ಕಥಾಸಂಕಲನದ ಮುನ್ನುಡಿಯಲ್ಲಿ ಹೀಗೆ ಬರೆಯುತ್ತಾರೆ: "ಶ್ರೀ ಬೆಸಗರಹಳ್ಳಿ ರಾಮಣ್ಣನವರ ಕಥನ ಕಲೆ ಸೃಷ್ಟಿ, ನೇರ, ಅವರಲ್ಲಿ ಹೊಸತನದ ಕೆಸರಿಲ್ಲ, ತಂತ್ರ ಚಾಪಲ್ಯವಿಲ್ಲ, ಕಥೆಯನ್ನು ಅವರೇ ನಿರೂಪಿಸುತ್ತಾರೆ. ಕೆಲವೊಮ್ಮೆ ತಮ್ಮ ಪಾತ್ರಗಳನ್ನು ಸೇರಿಸಿಕೊಳ್ಳುತ್ತಾರೆ. ಮನೋವ್ಯಾಪಾರದ ಘಟನೆಗಳು, ಅವುಗಳಿಗೆ ವ್ಯಾಖ್ಯಾನ, ವಿವರಣೆ ಬಹುಶ: ಅವರಿಗೆ ಇಷ್ಟವಾದ ರೀತಿ. ನೆನಪಿನ ಬೀಜಗಳನ್ನು ಬಿತ್ತಿ ಅವರು ಕಥೆಯನ್ನು ಬೆಳೆಸಬಲ್ಲರು. ಕಲೆ ಅನುಭವದ ಮೂಸೆಯಿಂದ ರೂಪುಗೊಳ್ಳುವದಾದರೆ ಅದು ಸಾಮಾನ್ಯವಾದುದಾದರೂ ಜೀವಂತವಾಗಿರ ಬಲ್ಲುದೆಂಬುದನ್ನು ಇಲ್ಲಿನ ಕಥೆಗಳಲ್ಲಿ ನಾವು ನೋಡಬಹುದು." ('ನೆಲದ ಒಡಲು' ಕೃತಿ ಮುನ್ನುಡಿ) ಇಲ್ಲಿನ ಕಥೆಗಳ ಬಗೆಗೆ ಟಿ.ಪಿ. ಅಶೋಕ ಅವರ ಮಾತುಗಳಲ್ಲಿ ಹೇಳುವುದಾದರೆ, "ಕಾಲ ಸರಿದಂತೆ, ಮನುಷ್ಯ ತಿಳಿಯಾದಂತೆ ಎಲ್ಲವೂ ಸರಿಹೋಗುವ ಸಂದರ್ಭಗಳನ್ನು ಕಾಣುತ್ತೇವೆ. ಇವೆಲ್ಲಾ ಸಮಸ್ಯೆಗಳಿಗೆ ವ್ಯಕ್ತಿಗಳೇ ನೇರವಾಗಿ ಭಾಗಿಗಳಾಗಿರುವುದರಿಂದ ಇವುಗಳ ಪರಿಹಾರ ಕೂಡ ವಯಕ್ತಿಕ, ಮಾನವೀಯ ಮಟ್ಟದಲ್ಲಿ ಸಾಧ್ಯವಾಗುತ್ತದೆ. ಒಬ್ಬ ವ್ಯಕ್ತಿಯ ಸಮಸ್ಯೆಗಳ ಮೂಲ ಆತನಿಂದ ಹೊರಗೆ ಇದ್ದರೆ ಅಂದರೆ ಬೇರೆ ವ್ಯಕ್ತಿಗಳ ದುಷ್ಟತನದಲ್ಲೊ, ಸಾಮಾಜಿಕ

ಸಂದರ್ಭದಲ್ಲೂ ಇದ್ದಾಗ, ಪರಿಹಾರ, ಹೃದಯ ಪರಿವರ್ತನೆಯ ನೆಲೆಯಿಂದ ಬಂಡಾಯದ ನೆಲೆಗೆ ವಿಸ್ತೃತವಾಗಬೇಕಾಗುತ್ತದೆ. ರಾಮಣ್ಣನವರ ಮೊದಲ ಕಥೆಗಳಲ್ಲಿ ಈ ರೀತಿಯ ಬಂಡಾಯವನ್ನು ವಯಕ್ತಿಕ ನೆಲೆಯಲ್ಲಿ ಗುರುತಿಸಿಕೊಳ್ಳುತ್ತೇವೆ. ಈ ಪ್ರಯತ್ನಗಳ ಸೋಲು ಕೂಡಾ ಇತ್ಯಾತ್ಮಕವಾದದ್ದೇ. ಏಕೆಂದರೆ ಇಲ್ಲಿ ಬಂಡಾಯದ ಪ್ರಯತ್ನವೇ ಗೆಲುವಿನ ಸಾಧ್ಯತೆಯ ಪ್ರಥಮ ಹೆಜ್ಜೆ" (ಟಿ.ಪಿ. ಅಶೋಕ ೧೯೯೧-ಪು ೧೨೯-೧೩೦).

ಇವರ ಮೊದಲ ಸಂಕಲನದ ಕಥೆಗಳಲ್ಲಿದ್ದ ಭಾವನಾತ್ಮಕ, ವ್ಯಕ್ತಿನಿಷ್ಠವಾದ ಸಮಸ್ಯೆಗಳು ನಂತರದ 'ಗರ್ಜನೆ' (೧೯೭೨) ಹಾಗೂ 'ಹರಕೆಯ ಹಣ'' (೧೯೭೬) ಕಥಾ ಸಂಕಲನಗಳಲ್ಲಿ ಸಾಮಾಜಿಕವಾದ ರೂಪವನ್ನು ಪಡೆದುಕೊಂಡಿವೆ. ಇಲ್ಲೆಲ್ಲ ವರ್ಣ ಸಂಘರ್ಷವು ಮೌನವಾಗಿ ವ್ಯಕ್ತವಾಗಿದೆ. 'ಜೀತ', 'ಕಳೆ', 'ಅಭಿಮಾನ', 'ಗರ್ಜನೆ', 'ಹರಕೆಯ ಹಣ', 'ಗಾಂಧಿ ಸಂತಾನ', 'ಕಕರನ ಯುಗಾದಿ' ಮತ್ತು 'ಸ್ವಾರ್ಥ' ಕಥೆಗಳಲ್ಲಿ ಕಂಡು ಬರುತ್ತದೆ. "ಮೊದಲ ಘಟ್ಟದ ಕಥೆಗಳಲ್ಲಿ ಕಂಡುಬರುತ್ತಿದ್ದ ಹೃದಯ ಪರಿವರ್ತನೆಯ ಸ್ಥಾಯಿಭಾವ, ಈ ಹಂತದ ಕಥೆಗಳಲ್ಲಿ ಸಾಮಾಜಿಕ ದಬ್ಬಾಳಿಕೆಗೆ ಸಿಡಿಯುವ ರೋಷವಾಗಿ ಅಭಿವ್ಯಕ್ತವಾಗಿವೆ." (ಕರೀಗೌಡ ಬೀಜನಹಳ್ಳಿ, ೧೯೯೧ ಪು ೧೯೦) ವಯಕ್ತಿಕ ಬಂಡಾಯದ ಚಿತ್ರ 'ಗರ್ಜನೆ'ಯಲ್ಲಿ ಸಾಕಷ್ಟು ಬಿಸಿಯಾಗಿಯೇ ಇದ್ದರೂ ರಾಮಣ್ಣನವರ ಮುಂದಿನ ಸಫಲ ಕಥೆಗಳೆಲ್ಲ ಸಾಮಾಜಿಕ ಅವನತಿ ಚಿತ್ರಗಳೇ. 'ಹರಕೆಯ ಹಣ', 'ಗಾಂಧಿ ಸಂತಾನ', 'ಕಕರನ ಯುಗಾದಿ' ಕಥೆಗಳಲ್ಲಿ ಕಂಡುಬರುವ ಸಾಮಾಜಿಕ ದಬ್ಬಾಳಿಕೆಯ ನೀತಿ ಭ್ರಷ್ಟತೆಯ ಚಿತ್ರಗಳು ಮೈನಡುಗಿಸುವಂತಿವೆ. ಬದಲಾಗುತ್ತಿರುವ ಗ್ರಾಮೀಣ ಬದುಕಿಗೆ ಭಾಷ್ಯಗಳಂತಿವೆ.

'ಹರಕೆಯ ಹಣ' ಸಂಕಲನದ ಕಥೆಗಳು ಗ್ರಾಮ್ಯ ಲೋಕದ ವಸ್ತುವನ್ನು ಒಳಗೊಂಡಿವೆ. ಅದರಲ್ಲೂ ಒಂದು ನಿರ್ದಿಷ್ಟ ಪ್ರಾದೇಶಿಕ ಹಿನ್ನೆಲೆಯಲ್ಲಿ ಈ ಸಮಾಜದ ಬೃಹತ್ ಭಾಗದ ಬದುಕಿನ ಸ್ತರಗಳನ್ನು ಚಿತ್ರಿಸುವ ಕಥೆಗಳು ಇಲ್ಲಿವೆ. ಸಮಾಜದಲ್ಲಿ, ಅಂತೆಯೇ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಅಲಕ್ಷ್ಯಕ್ಕೀಡಾದ ಜನಾಂಗದ ಬದುಕಿನ ವಿವಿಧ ಸ್ತರಗಳನ್ನು, ಸಾಂಸ್ಕೃತಿಕ ಶೋಷಣೆಯ ಸೂಕ್ಷ್ಮಗಳನ್ನು ಅಭಿವ್ಯಕ್ತಿಸುವ ಪ್ರಯತ್ನ ಮಾಡಿದ್ದಾರೆ. ಇಲ್ಲಿ ಕಟಕಿಯನ್ನು ಬಗ್ಗಿಸಿಕೊಳ್ಳುವ ಹೊಸ ಶೈಲಿಗೂ ಪ್ರಯತ್ನಿಸಿದ್ದಾರೆ. ಇದು ಗಮನಿಸಬೇಕಾದ ಅಂಶ. ಪಟ್ಟಭದ್ರರು ಹಾಗೂ ಅಧಿಕಾರಶಾಹಿಯ ನಡವಳಿಕೆ ಮತ್ತು ವ್ಯಕ್ತಿನಿಷ್ಠ ಪ್ರತಿಭಟನೆಯ ಇತಿಮಿತಿಗಳನ್ನು ಸಾಂಸ್ಕೃತಿಕ ಸಾಮಗ್ರಿಯ ಹಿನ್ನೆಲೆಯಲ್ಲಿ ಹಿಡಿದಿಟ್ಟ 'ಹರಕೆಯ ಹಣ' ಕಥೆ ಗಮನಾರ್ಹವಾಗಿದೆ. ಇದು ಮೇಲು ಕೀಳಿನ ಸಮಸ್ಯೆಯನ್ನು ಸಾಂದ್ರವಾಗಿ ಹಿಡಿಯುತ್ತದೆ. ಬಹುಪಾಲು ಕೆಳವರ್ಗದವರು ಹೇಳಿದ ಹಾಗೆ ಕೇಳಿಕೊಂಡಿರುವ ಮನಸ್ಸುಳ್ಳವರಾದರೂ ಅಲ್ಪ ಸ್ವಲ್ಪ ವಿದ್ಯಾಭ್ಯಾಸದಿಂದ, ಆಧುನಿಕ ವಿಚಾರಗಳಿಂದ ಎಚ್ಚೆತ್ತ ಬೆರಳೆಣಿಕೆಯ ವ್ಯಕ್ತಿಗಳನ್ನು ಕಥೆಗಾರರು

ಜೀವಂತವಾಗಿ ಚಿತ್ರಿಸುತ್ತಾರೆ. ಅವರ ಸ್ವಾಭಿಮಾನ, ಕೆಚ್ಚು, ಹಣ, ರೋಷ, ಶಕ್ತಿ ಮುಂತಾದ ಗುಣಗಳು ಅವರ ಕತ್ತಲ ಬಾಳಿನ ಹಂದರದಲ್ಲೇ ಇಣುಕುವ ಕಿರಣಗಳಾಗಿವೆ.

ಹಳ್ಳಿಯ ನೈಜ ಬದುಕನ್ನು ಹಾಳು ಮಾಡುವ ದುಷ್ಟ ಶಕ್ತಿಗಳ ಬಗ್ಗೆ ಕಥೆಗಾರರಿಗೆ ಎಲ್ಲಿಲ್ಲದ ಆಕ್ರೋಶವಿದೆ. ಕಥೆಗಳಲ್ಲಿರುವ ಆಕ್ರೋಶ ತೀವ್ರವಾಗದೆ, ನಿಧಾನವಾಗಿ ತಿಳಿಯಾಗಿ ಮಾನವ ಸಂಬಂಧಗಳಿಗೆ ಬೆಲೆಕೊಟ್ಟು, ಒಡೆದು ಹೋದ ಮನ ಅಥವಾ ಕುಟುಂಬಗಳು ಒಂದಾಗುವುದನ್ನು ಅವರು ಚಿತ್ರಿಸುತ್ತಾ ಹೋಗುತ್ತಾರೆ. 'ಹರಕೆಯ ಹಣ' ಕಥೆಯಲ್ಲಿ ಬರುವ 'ಸುಮಾನಿ' ಅಂಥ ಒಂದು ಪಾತ್ರ. ಆತ ತನ್ನ ಜನಾಂಗದವರ ಹಕ್ಕುಗಳಿಗಾಗಿ ಹೋರಾಡುತ್ತಾನೆ. ಆದರೆ ಅವನ ಜನರೇ ಅವನಿಗೆ ಬೆಂಬಲ ನೀಡುವುದಿಲ್ಲ. ಸತ್ಯಕ್ಕೆ ಬೆಲೆ ಕೊಡಬೇಕಾದ ಜನರ ಪ್ರತಿನಿಧಿ (ಎಂ.ಎಲ್.ಎ.) ಅನ್ಯಾಯದ ಕಡೆ ಅಂದರೆ ಮೇಲು ವರ್ಗದವರ ಜೊತೆ ಸೇರಿಕೊಳ್ಳುವದು, ಪೋಲೀಸ್ ವ್ಯವಸ್ಥೆ ಮೋಸ, ಜಾತಿವ್ಯವಸ್ಥೆಯ ಕೊಳಕು ಅಸಹ್ಯವೆನಿಸುತ್ತದೆ. ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ಬದಲಾಗಿ ಅದನ್ನು ಮತ್ತೂ ಸಂಕೀರ್ಣಗೊಳಿಸುವ ಜೀವನ ಗತಿ ಅಮೋಘವಾದುದು. ಇದೆಲ್ಲದರ ನಡುವೆಯೂ ತಾನು ಗೌಪ್ಯವಾಗಿ ಪ್ರೀತಿಸುವ ಹೆಣ್ಣನ್ನು ತನ್ನ ಆಳುಮಗನಿಗೆ ಮಾಡಿಕೊಂಡು ತಾನೇ ಅನುಭವಿಸಬೇಕೆಂದು ಹವಣಿಸುತ್ತಿದ್ದ ಪಟೇಲನನ್ನು ಸೋಲಿಸುವ ಸುಮಾನಿ ಪಾತ್ರ ಬಂಡೆದ್ದ ದಲಿತರ ವಾಸ್ತವ ಪ್ರಜ್ಞೆಗೆ ಸಾಕ್ಷಿಯಾಗಿದೆ. ಕಥೆಗಾರರು ಮಾನವೀಯ ದೃಷ್ಟಿಯಿಂದ ಕಥೆಯ ನೆಲೆಯಲ್ಲಿ ಆ ಮೋಸವನ್ನೆಲ್ಲಾ ಬಹಿರಂಗ ಪಡಿಸಿದ್ದಾರೆ. "ಆಧುನಿಕ ವಿದ್ಯಾಭ್ಯಾಸದ ವಿಚಾರಗಳಿಂದ ಎಚ್ಚೆತ್ತ ವ್ಯಕ್ತಿಗಳನ್ನು ಕಥೆಗಾರರು ಇಲ್ಲಿ ಜೀವಂತವಾಗಿ ಮೂಡಿಸಿದ್ದಾರೆ." (ಕರೀಗೌಡ ಬೀಚನಹಳ್ಳಿ, ೧೯೯೧, ಪು ೧೯೦) ಭಗವಾನರ ಮಾತಿನಲ್ಲಿ ಹೇಳುವುದಾದರೆ, "ಪರಿವರ್ತನೆಯನ್ನು ರಾಮಣ್ಣನವರಷ್ಟು ಕಲಾತ್ಮಕವಾಗಿ ಹಿಡಿಯುವ ಕಥೆಗಾರನನ್ನು ಕನ್ನಡ ಕಾಣಬೇಕಾಗಿದೆ. ಅವರ ಪಾತ್ರಗಳು ಸಿದ್ಧಾಂತದ ನಿರ್ಜೀವ ಬೊಂಬೆಗಳಾಗಿರದೆ ರಾಗದ್ವೇಷಗಳ ಜೀವಂತ ಪ್ರತಿಮೆಗಳಾಗಿವೆ." ('ಕನ್ನಂಬಾಡಿ' ಮುನ್ನುಡಿ)

'ಕಕರನ ಯುಗಾದಿ' ಉತ್ತಮ ಕಥೆಗಳ ಸಾಲಿನಲ್ಲಿ ಸೇರಿಕೊಳ್ಳುತ್ತದೆ. 'ಕಕರ' ದಲಿತ ಲೋಕದ ನಿಷ್ಠಾವಂತ ವ್ಯಕ್ತಿ. ಇದೊಂದು ದುರಂತಮಯ ಕಥೆ. ದಲಿತ ವರ್ಗದ ನೋವು, ಮೇಲ್ವರ್ಗದ ಶೋಷಣೆಯೇ ಕಥಾವಸ್ತು. ದಲಿತ ವರ್ಗ (ಶ್ರಮಿಕವರ್ಗ) ಮಳೆಗಾಗಿ, ಬೆಳೆಗಾಗಿ ಹೊಟ್ಟೆಗಾಗಿ, ಪರದಾಟದಲ್ಲಿ ತೊಡಗಿದ್ದರೆ, ಶೋಷಿಸುವ ವರ್ಗ ಇದಾವುದರ ಪರದಾಟವಿಲ್ಲದೆ ದಲಿತರ ಬೆವರನ್ನು ಅನುಭವಿಸುವ ಹಕ್ಕುದಾರರಾಗಿ ಸಂತೃಪ್ತಿಯ ಜೀವನ ನಡೆಸುವುದು ಇಲ್ಲಿ ಕಂಡು ಬರುತ್ತದೆ. ಊರೆಲ್ಲಾ ಯುಗಾದಿ

ಹಬ್ಬವನ್ನು ಸಂಭ್ರಮದಿಂದ ಆಚರಿಸುವಾಗ, ಕಕರನ ಮನೆಯಲ್ಲಿ ಯಾವುದೇ ಹೊಸತನವಿರದಿದ್ದಾಗ ತನ್ನ ಮಕ್ಕಳಿಗಾಗಿ ಸಾಲ ಮಾಡಿಯಾದರೂ ಹಬ್ಬ ಆಚರಿಸಲು ಮುಂದಾಗುತ್ತಾನೆ.

ಕಥೆಗಾರರಿಗಿರುವ ದಲಿತ ವರ್ಗದ ಕಾಳಜಿ ಈ ಮಾತುಗಳ ಮೂಲಕ ಧ್ವನಿತವಾಗುತ್ತದೆ. ಪುಟ್ಟೇಗೌಡನ ಮಗಳ ಮದುವೆಯಲ್ಲಿ ಊಟಕ್ಕಾಗಿ "ನಿಮ್ಮವರೆಲ್ಲಾ ಕಾಯುತ್ತಾ ಇದ್ದಾರೆ" ಎಂದು ಜೋಯಿಸರು ಕಕರನಿಗೆ ಹೇಳಿದಾಗ ಕಕರ ತನ್ನ ಸಮೂಹವನ್ನೇ ಪ್ರತಿನಿಧಿಸುವಂತೆ "ಹಾಳು ಹೊಟ್ಟೆ ಕೆಟ್ಟದ್ದು, ಜೊತೆಗೆ ಮಳೆ ಹೋಗಿ ಬೆಟ್ಟ ಸೇರಿಕೊಂಡಿದೆ. ಅವರದೇನು ತಪ್ಪು?" ಎಂದುಕೊಂಡು ಮಾತಿನ ಗತಿಯನ್ನು ಬದಲಿಸಲು ಕೇಳಿದ. "ಸ್ವಾಮಿ, ಈ ಯುಗಾದಿಗಾದ್ರೂ ಮಳೆ ಆದಾತ್ರ?".

"ಮಳೆ ಮನೆ ಮಾರೊತ್ತು ಹೋಯ್ತು, ಹಾಲು ಗೂಡಿಗೆ ನಾಲ್ಕು ಹೆಜ್ಜೆ ಮಾತು ಹೋಗೋ ಅಂದ್ರೆ. ಒಳ್ಳೆ ಐನಾತಿ ಊಟ."

"ಅದಿರಲಿ ಸ್ವಾಮಿ, ಮಳೆ ವಿಷ್ಯ ಮಾತಾಡಿ, ದನಕರು ಗೋಳು, ಹಕ್ಕಿ ಪಕ್ಷಿಗೋಳ್ಗೆಲ್ಲ ಬೋ ಕಷ್ಟ ಆಗೋಯ್ತು. ಧರೆಯೇ ಉರಿತಾ ಅದೆ!"

ಜೋಯಿಸರಿಗೆ ಕಕರನಿಂದ ಒಂದು ಕೆಲಸ ಆಗಬೇಕಾಗಿತ್ತು. ಅದಕ್ಕಾಗಿ ಕಕರನಿಗೆ ಭವಿಷ್ಯವನ್ನು ನುಡಿದು "ಈ ಯುಗಾದಿಗೆ ನಿನ್ನ ಕಷ್ಟ ಎಲ್ಲಾ ಕಳೀತೂ, ನಿನಗೆ ಮುಂದೆ ಬಹಳ ಒಳ್ಳೆಯದಾಗುತ್ತದೆ". ಇದನ್ನು ಕಕರ ಒಪ್ಪದಿದ್ದಾಗ ಜೋಯಿಸರು, ಒಪ್ಪಿಕೊಳ್ಳುವ ಹಾಗೆ ನಯ-ನಾಜೂಕಿನಿಂದ ಮನಸ್ಸನ್ನು ಪರಿವರ್ತಿಸುತ್ತಾರೆ. ಅವರು ನುಡಿದ ಭವಿಷ್ಯ ಕಕರನಿಗೆ ಮುಂದೆ ಬರಬಹುದಾದ ದುರಂತ ಎಂದು ಅರ್ಥೈಸಿಕೊಳ್ಳಬಹುದು.

ಕಟ್ಟಿಗೆ ಹೊರೆ ತಂದು ಹಾಕಿದ ಕಕರ ಜೋಯಿಸರ ಬಳಿ ಹಬ್ಬಕ್ಕೆಂದು ೨೫ ರೂ. ಕೇಳುತ್ತಾನೆ. ಅದಕ್ಕೆ ಅವರು 'ನಾಳೆ ಬಾ ನೋಡೋಣ' ಎನ್ನುತ್ತಾರೆ. ನಾಳೆಯನ್ನು ಬೇಗ ತರಿಸಿಕೊಳ್ಳುವಂತೆ ಕಕರ ಮನೆಯ ಕಡೆ ಹೆಜ್ಜೆ ಹಾಕಿದ. ಸಂತೆಯ ಮಾರ್ಗವಾಗಿ ನಡೆಯುತ್ತಿದ್ದ ಕಕರನನ್ನು ಕುಳಯ್ಯ ವ್ಯಂಗ್ಯದಿಂದ ಕರೆಯುತ್ತಾ "ನಾಳಾಕೆ ಹಬ್ಬ ಜೋರೋ ಅನ್ನು". ಅದಕ್ಕೆ ಕಕರ "ಏನು ಜೋರೋ, ನಿನ್ನ ಎಕ್ಕಡ."

"ನಿಂಗೇನು ಕಡ್ಮೇಲ? ಗೌಡ್ರ ಮಗನಿಗೆ ಹೇಳಿಕಳಿಸಿದರೆ ಖಂಡುಗ ಗಟ್ಟಲೆ ಅಕ್ಕಿ, ರಾಗಿ ಬಂದು ಮನೇಲಿ ಬೀಳ್ತದಪ್ಪ." ಈ ಮಾತುಗಳಿಂದ ಕಕರನಿಗೆ ಭೂಮಿಯೇ

ನಡುಗಿದಂತಾಯ್ತು. ಅಲ್ಲಿಯೇ ಇದ್ದ ಚಿಕ್ಕ ತಾಯಿಯಿಂದ, ನಾಗಿಯು ಹೊಟ್ಟೆ ನೋವಿನಿಂದ ನರಳುವ ವಿಷಯ ತಿಳಿದು ಇನ್ನೂ ಜಜ್ಜಿ ಹೋದನು.

ಇಲ್ಲಿ ಮೇಲ್ವರ್ಗ ತನ್ನ ಸು:ಖಕ್ಕೆ ಅಮಾಯಕ ಸ್ತ್ರೀಯನ್ನು ಬಲಿಯಾಗಿಸುವ, ಇಂಥ ಶೋಷಣೆಯನ್ನು ಅನುಭವಿಸಿ, ಬದುಕಿನಲ್ಲಿ ತೊಳಲಾಡುವ ಮುಗ್ಧ ಜನರ ಚಿಂತಾಜನಕ ಸನ್ನಿವೇಶ ಚಿತ್ರಿತವಾಗಿದೆ. ಅವಮಾನ, ಹಸಿವು, ನಿದ್ರಾಭಂಗಗಳನ್ನು ಸಹಿಸಿಕೊಂಡು, ಹಬ್ಬಕ್ಕೆಂದು ಕೇಳಿದ ಸಾಲವನ್ನು ಮಗಳ ಹೆರಿಗೆಯ ಔಷಧಿಗಾಗಿ ಖರ್ಚು ಮಾಡಲು ನಿರ್ಧರಿಸಿ ಕಕರ ಪುರೋಹಿತರ ಮನೆಗೆ ಹೋದ.

ಪುರೋಹಿತರ ಮನೆಯಲ್ಲಿ ಬಂಜೆತನದಿಂದ ಬಳಲುವ ಸ್ತ್ರೀಯನ್ನು ಕಠೋರ ಮಾತುಗಳಿಂದ ಹಬ್ಬದ ದಿನವೂ ಬೈಯುತ್ತಿದ್ದಾಗ, ಅವಳು ಮನೆಯಲ್ಲಿರುವ ಬಾವಿಗೆ ಹಾರಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಪುರೋಹಿತರ ಮಾತಿನಂತೆ ಕಕರ ವಿಧಿಯಿಲ್ಲದೆ ತಾನು ಯಾವ ಮನೆಯ ಹೊಸ್ತಿಲನ್ನು ದಾಟಬಾರದಿತ್ತೋ ಅದನ್ನು ದಾಟಿಯೇ ತನ್ನೆಲ್ಲ ನೋವನ್ನು ಮರೆತು ಪುರೋಹಿತರ ಹೆಂಡತಿಯನ್ನು ಉಳಿಸಲು ಬಾವಿಗೆ ಧುಮುಕಿಬಿಟ್ಟ. ಪ್ರಾಣ ಉಳಿಸಲು ಪ್ರಾಮಾಣಿಕ ಪ್ರಯತ್ನ ನಡೆಸಿ ಕೊನೆಗೆ ತಾನೇ ಬಲಿಯಾದ. ಇಲ್ಲಿಯೇ ಕಕರ ಧೀಮಂತನೂ, ನಿಷ್ಠನೂ ಆಗಿ ನಿಲ್ಲುವುದು. ಅವನ ನಿಸ್ವಾರ್ಥ ಸೇವೆಗೆ ಬೆಲೆ ಸಿಗುವುದಿಲ್ಲ. ಬದಲಾಗಿ ಅವನ ಸಂಸಾರ ಅನಾಥವಾಗುತ್ತದೆ. ಕಕರನ ಮನೆಯ ಜನರನ್ನು ಅನೇಕ ಕಷ್ಟಗಳಿಗೆ ಗುರಿಪಡಿಸಿದರೆ, ಪುರೋಹಿತರ ಮನೆಯಲ್ಲಿ ಅದಕ್ಕಾಗಿ ಪರದಾಡುವುದು ಈ ಕಾರಣದಿಂದಲೆ. ತನ್ನನ್ನು ತಾನು ಬಲಿಕೊಟ್ಟುಕೊಳ್ಳುವ ಪುರೋಹಿತರ ಹೆಂಡತಿ ಮತ್ತು ಕಕರನ ಸ್ಥಿತಿ ಒಂದೇಯಾಗಿ ತೋರುತ್ತದೆ. ಇಲ್ಲಿ ಪುರೋಹಿತರ ಹೆಂಡತಿ ಪ್ರಾಣ ಕಳೆದುಕೊಳ್ಳುವುದರ ಮೂಲಕ ಬದುಕನ್ನು ಮುಗಿಸಿದರೆ, 'ಕಣಿವೆಯ ಅಂಚು' ಕಥೆಯಲ್ಲಿ ಸರೋಜಕ್ಕ ಮಗುವಿಗಾಗಿ ಆಸೆ ಪಟ್ಟು ಕೆಂಗಣ್ಣನನ್ನು ಕೂಡಲು ಹೋಗುತ್ತಾಳೆ. ಕೆಂಗಣ್ಣ ಇದಕ್ಕೆ ಅವಕಾಶಕೊಡುವುದಿಲ್ಲ. ಅವನ ಬಾಯಿಂದ ಬರುವ ಮಾತುಗಳಿಂದ ಇದನ್ನು ಸ್ಪಷ್ಟಪಡಿಸಿಕೊಳ್ಳಬಹುದು. "ಅಕ್ಕ; ನಾನು ತಾಯಿಗಂಡ ಅಲ್ಲ," ಇನ್ನೂ ಮುಂದುವರಿಸಿದ ಮಾತುಗಳು ಅವನ ಸ್ವಾಮಿ ನಿಷ್ಠೆಗೆ ಸಾಕ್ಷಿಯಾಗಿವೆ. "ಅಕ್ಕ ಈ ಕೈಯಿಂದ ನನಗೆ ಅನ್ನ ಹಾಕಿದ್ದೀ, ತಲೆಗೆ ಎಣ್ಣೆ ಹಾಕಿದ್ದೀ; ಅಣ್ಣಾರೂ ನನ್ನ ತಮ್ಮನಂಗೆ ಕಂಡಕೊಂಡವ್ರೆ. ನಿನ್ನ ಕೈಯಿಂದ ವಿಷ ಬೇಕಾದ್ರೂ ನಗ್ತಾನಗ್ತಾ ತಿಂದೇನೂ.... ಆದ್ರೆ ಉಂಡ ಮನೆಗೆ, ನಂಬಿದೋರ್ಗೆ ಎರಡು ಬಗಿ ಅಂತ ನಮ್ಮವ್ವ ನನ್ನ ಹೆತ್ತಿಲ್ಲ ಕಣಕ್ಕ".

ಸರೋಜಕ್ಕ ಇಲ್ಲಿ ಕೆಂಗಣ್ಣನಿಂದ ನಂಬಿದವರಿಗೆ ದ್ರೋಹಮಾಡಬಾರದು ಎನ್ನುವ ಪಾಠವನ್ನು ಕಲಿತು ತನ್ನ ಗಂಡನೊಂದಿಗೆ ಬಾಳುತ್ತಾಳೆ. ಇಲ್ಲಿ ಕೆಂಗಣ್ಣನನ್ನು ಸೇರಲು

ಹೋದದ್ದು, ಅದನ್ನು ಅವನು ನಿರಾಕರಿಸಿದ್ದು ಮತ್ತು ಆ ಊರನ್ನೇ ಬಿಟ್ಟು ಹೋಗಿರುವುದು ಇವೆಲ್ಲವನ್ನು ಕಥೆಗಾರರು ಚೆನ್ನಾಗಿಯೇ ಸರೋಜಕ್ಕನ ಮನೆಯವರಿಗೆ ಅನುಮಾನಬಾರದಂತೆ ಚಿತ್ರಿಸಿದ್ದಾರೆ.

'ಗಾಂಧಿ ಸಂತಾನ'ವು ರಾಮಣ್ಣನವರ ಧೋರಣೆಯನ್ನು ಪ್ರಕಟಿಸುವ ಕಥೆ. ಶೋಷಣೆಯ ವಿರುದ್ಧದ ಧ್ವನಿ ಕೆಲವು ಕಥೆಗಳಲ್ಲಿ ಒಂದಲ್ಲ ಒಂದು ರೂಪದಲ್ಲಿ ಕಾಣಿಸಿಕೊಂಡಿವೆ. ಕೆಳವರ್ಗದವರನ್ನು ಶೋಷಣೆ ಮಾಡುವ ಮೇಲ್ವರ್ಗದವರ ವಿರುದ್ಧ ಅಪಾರ ಸಿಟ್ಟಿದೆ. ಮಾನವೀಯ ಮೌಲ್ಯಗಳೇ ಇವರ ಕಥೆಗಳಲ್ಲಿ ಪ್ರಧಾನವಾಗಿದೆ. ಸಾಮಾಜಿಕ ಶೋಷಣೆಯ ವಿವಿಧ ಮಜಲುಗಳನ್ನು ಸೂಕ್ಷ್ಮವಾಗಿ ಚಿತ್ರಿಸುವಲ್ಲಿ ಸಫಲರಾಗಿದ್ದಾರೆ. ಮೆಣಸನ ಪಾತ್ರದ ಮೂಲಕ ದಲಿತ ವರ್ಗದ ಬಗೆಗೆ ಇರುವ ಕಾಳಜಿಯನ್ನು ವ್ಯಕ್ತಪಡಿಸುತ್ತಾರೆ. ದಲಿತರ ಉದ್ಧಾರ ಮತ್ತು ಪ್ರಗತಿಪರ ದೃಷ್ಟಿಕೋನ ಕಥೆಯಲ್ಲಿ ಕಂಡು ಬರುತ್ತದೆ. ಮೆಣಸ ತುಂಬಾ ಪ್ರಗತಿಪರ ಹಿನ್ನೆಲೆಯವನಾಗಿ ಕಂಡು, ಸನ್ನಿವೇಶಗಳ ಸಂಯೋಜನೆಯ ಹಿಂದೆ ಕೆಲಸಮಾಡಿರುವ ದೃಷ್ಟಿಕೋನ ಪ್ರಗತಿಪರವಾಗಿದೆ. ಬಡಜನತೆಯ ಬಗ್ಗೆ ಅನುಕಂಪ, ಸಹಾನುಭೂತಿಗಳು ಇಲ್ಲೆಲ್ಲ ಕಂಡುಬರುವ ಸಾಮಾನ್ಯ ಅಂಶಗಳಾಗಿವೆ. "ಪಟ್ಟಭದ್ರರು, ಹಾಗೂ ಅಧಿಕಾರಿಶಾಹಿಯ ನಡವಳಿಕೆ ಮತ್ತು ವ್ಯಕ್ತಿನಿಷ್ಠ ಪ್ರತಿಭಟನೆಯ ಇತಿಮಿತಿಗಳನ್ನು ಸಾಂಸ್ಕೃತಿಕ ಸಾಮಗ್ರಿಯ ಹಿನ್ನೆಲೆಯಲ್ಲಿ ಹಿಡಿದಿಟ್ಟ 'ಹರಕೆಯ ಹಣ' ಕಥೆ ಗಮನಾರ್ಹವಾದದು (ಸಾಹಿತ್ಯ ವಾರ್ಷಿಕ, ೧೯೭೬, ೧೯೭೮, ಪು-೩೮). ವಸ್ತು, ಶೈಲಿ, ತಂತ್ರದಲ್ಲಿ ತಮ್ಮದೇ ಆದ ವೈಶಿಷ್ಟತೆಯಿಂದ ಮೆರೆದಿದ್ದಾರೆ.

'ಒಂದು ಹುಡುಗನಿಗೆ ಬಿದ್ದ ಕನಸು' ಕಥಾಸಂಕಲನ ಇವರಿಗೆ ಅತ್ಯಂತ ರೋಮಾಂಚನವನ್ನುಂಟು ಮಾಡಿದೆ. ಇದರಲ್ಲಿರುವ 'ಶೂಲ' ಮತ್ತು 'ಚಲುವನ ಪರಂಗಿ ಗಿಡಗಳು' – ಈ ಎರಡು ಕಥೆಗಳನ್ನು ಬಿಟ್ಟು ಉಳಿದೆಲ್ಲ ಕಥೆಗಳು ತುರ್ತುಪರಿಸ್ಥಿತಿಯಲ್ಲಿ ಬರೆದವುಗಳಾಗಿವೆ. ಇವರೇ ಹೇಳುವಂತೆ "ತುರ್ತುಪರಿಸ್ಥಿತಿಯಂತಹ 'ಅನಿಷ್ಟ' ಕಾಲದಲ್ಲಿ ಅನೇಕ ಮೌಲ್ಯಗಳಿಗೆ ಬಿದ್ದಿದ್ದ ಪೆಟ್ಟನ್ನು ಈ ಕಥೆಗಳು ಗುರುತಿಸಿವೆ, ಪ್ರತಿಭಟಿಸಿವೆ. ಒಂದು ಹುಡುಗನಿಗೆ ಬಿದ್ದ ಕನಸು, ನನ್ನ ಮಗ ರವಿಕಾಂತಗೌಡನಿಗೆ, ನಾನು ತುರ್ತುಪರಿಸ್ಥಿತಿ ಕಾಲದಲ್ಲಿ ಕೊಡಿಯಾಲ ಎಂಬ ಹಳ್ಳಿಯಲ್ಲಿ ವೈದ್ಯನಾಗಿದ್ದಾಗ ಬಿದ್ದ ಕನಸು. ಆ ಕಾಲದಲ್ಲಿ ನನ್ನ ಮಗನ ಮನಸ್ಸಿಗೆ ಉಂಟಾಗಿದ್ದ ಆಘಾತ ಮತ್ತು ಆಘಾತಕ್ಕೆ ಕಾರಣವಾದ ವಿಷಯಗಳ ಬೆಳಕಲ್ಲಿ ಈ ಕಥೆ ಮೂಡಿಬಂತು" ('ಕನ್ನಂಬಾಡಿ' ೧೯೮೬ – ಪು.೧೩). ಇಲ್ಲಿ ವಸ್ತು, ಭಾಷೆಯಲ್ಲಿ ಕಥೆಗಾರರು ಹೆಚ್ಚು ವೈಚಾರಿಕವಾಗಿ ತುಂಬಾ ಮೇಲೆರುತ್ತಾರೆ. ಈ ಸಂಕಲನದ ಕಥೆಗಳು ವ್ಯವಸ್ಥೆಯ, ಸಾಮಾಜಿಕ, ರಾಜಕೀಯ ವ್ಯಕ್ತಿಗಳ ಕಾರ್ಯ, ಕಾಠಿಣ್ಯ, ಕೊಲೆಗಡುಕತನವನ್ನು

ಸ್ಫೋಟಿಸುತ್ತವೆ. ಸುತ್ತಣ ಬದುಕಿನ ನೋವು, ಅಸಹಾಯಕತೆ, ಅವಮಾನ, ದು:ಖದುಮ್ಮಾನ, ಈ ಜೀವಸಲೆಗಳಿಗೆ ಸ್ಪಂದಿಸುವ ಜೀವಪರ ಆಶಯಗಳು ಈ ಕಥೆಗಳಲ್ಲಿವೆ. ಇವರು ಇಲ್ಲಿ ಕಥೆ ಹೇಳುವ ರೀತಿಯಲ್ಲೇ ಓದುಗನನ್ನು ಅದ್ಭುತವಾಗಿ ಸೆರೆಹಿಡಿಯುತ್ತಾರೆ. ಅತ್ಯಂತ ಹೃದಯ ಕಲಕುವ ಸನ್ನಿವೇಶಗಳಲ್ಲಿ ಇವರ ಯಶಸ್ಸು ಶೈಲಿಯನ್ನವಲಂಬಿಸಿದೆ. 'ಒಂದು ಹುಡುಗನಿಗೆ ಬಿದ್ದ ಕನಸು' ಕಥೆಯಲ್ಲಿ ಕಪ್ಪು ಮುಖವಾಡ ತೊಟ್ಟ ವ್ಯಕ್ತಿಗಳು ಮೇಷ್ಟ್ರನ್ನು ಗುಂಡಿಕ್ಕಿ ಕೊಂದು ತೂಗು ಹಾಕುವ ಭೀಕರ ದೃಶ್ಯ ಕಥೆಯ ನಾಲ್ಕನೆಯ ಭಾಗದಲ್ಲಿ ಬರುತ್ತದೆ. ಮೊದಲ ಮೂರು ಭಾಗಗಳಲ್ಲಿ ಪ್ರಜಾಪ್ರಭುತ್ವ, ಸ್ವಾತಂತ್ರ್ಯ ಹೋರಾಟಗಾರರ ಪಟ್ಟಿ ಮತ್ತು ಕರುಣಾಕರನ್ ಸ್ಮಾರಕ ಇವುಗಳ ಪ್ರಸ್ತಾಪವಿದೆ. ಅಪ್ಪ-ಮಗನ ಸಂಭಾಷಣೆ ಆತ್ಮೀಯವಾಗಿ ಮೂಡಿ ಬಂದಿದೆ. ಸಂಭಾಷಣೆಯ ಒಂದು ಭಾಗ ಈ ಕೆಳಗಿನಂತಿದೆ:

"ಅಪ್ಪಾ! ಅಪ್ಪಾ!! ಇದೇನಪ್ಪಾ......?"

"ಅರಮನೆ ಕಣೋ, ನಮ್ಮನ್ನು ಆಳುತಿದ್ದ ಅರಸರು ಇದ್ದ ಮನೆ"

"ಇಂಥ ಮನೇಲಿ ಎಷ್ಟು ಜನ ಇರಬೋದು, ಎಷ್ಟು ಜನ ಅರಸರು ಇದ್ದರು ಇಲ್ಲಿ......"

"ಹೋಗೋ ಕಮಂಗಿ! ಒಬ್ಬರೇ. ಇನ್ನೇನು ಒಂದು ರಾಜ್ಯಕ್ಕೆ ಸಾವಿರ ರಾಜರು ಇರ್ತಾರೆ ಎಂದು ಕೊಂಡ........' ಈ ಉತ್ತರದಿಂದ ಹುಡುಗನ ಉತ್ಸಾಹ ಕುಗ್ಗಬಹುದೆಂದು ಭಾವಿಸಿದ್ದ ಅಪ್ಪನ ನಿರೀಕ್ಷೆ ತಪ್ಪಾಯಿತು.

"ಒಂದು ರಾಜ್ಯಕ್ಕೆ ಒಬ್ಬ ರಾಜ ಸರಿ. ಆದರೆ ಅವನಿಗೆ ಲೆಕ್ಕವಿಲ್ಲದಷ್ಟು ಜನ ಹೆಂಡತೀರು ಇರಬೇಕು, ಅಲ್ವ?"

ಮಗನ ಕುತೊಹಲಕಾರಿ ಪ್ರಶ್ನೆಗಳು ಅಪ್ಪನನ್ನು ತಬ್ಬಿಬ್ಬಾಗಿಸುತ್ತವೆ. ಒಟ್ಟಿನಲ್ಲಿ ಕಥಾ ನಿರೂಪಣೆ ಸೊಗಸಾಗಿ ಮೂಡಿ ಬಂದಿದೆ.

'ಶೂಲ' ಈ ಸಂಕಲನದ ಮೊದಲ ಕಥೆ. ಇದರ ವಸ್ತು ಗಂಡು – ಹೆಣ್ಣಿನ ಅಮರ ಪ್ರೇಮ. ಎರಡು ಕುಟುಂಬಗಳ ನಡುವಿನ ದ್ವೇಷಕ್ಕೆ ಪ್ರಣಯಿಗಳಿಬ್ಬರು ಬಲಿಯಾಗುತ್ತಾರೆ. ಇದನ್ನು ಅತ್ಯಂತ ಹೃದಯ ಕಲಕುವಂತೆ ಚಿತ್ರಿಸಿದ್ದಾರೆ. ಇಡೀ ಸನ್ನಿವೇಶ 'ಶೂಲದ ಹಬ್ಬ'ದ ರಮ್ಯ ಪ್ರಸಂಗಗಳು, ಸಾಹಸ, ತ್ಯಾಗ ಮತ್ತು ದುರಂತಗಳಿಂದ ಕೂಡಿದ್ದು ಕಥೆಯ ಒಟ್ಟು ತಿರುಳು ಮತ್ತು ಪರಿಣಾಮಗಳು ಇದೊಂದು ಜನಪದ ಕಥೆಯೆನ್ನುವ ಹಾಗೆ ಮಾಡಿದೆ. ಇಲ್ಲಿ ಮಾಸ್ತಿಕಲ್ಲು ಅಮರ ಪ್ರೇಮ ಮತ್ತು ತ್ಯಾಗದ ಸಂಕೇತವಾಗಿ, ಇಡೀ ಸನ್ನಿವೇಶ ಮಾಸ್ತಿಕಲ್ಲಿನ ಒಳಗಿರುವ ಚಿತೆಯೇರಿದ ಹೆಣ್ಣಿನ ಸಮೀಕರಣವಾಗಿ ಕಥೆಗೆ ಭಾವುಕತೆಯ ಅಂತ್ಯವನ್ನು ಕೊಡುತ್ತದೆಯೇ ವಿನಾ, ಬೇರೊಬ್ಬನೊಂದಿಗೆ

ಮದುವೆ ನಿಶ್ಚಯಿಸಿದಾಗ ಆಕೆಯ ಪ್ರತಿಭಟನೆಯ ಸ್ವರ ಎಲ್ಲೂ ಕೇಳಿಬರುವುದಿಲ್ಲ, ಶಂಕರನೊಂದಿಗೆ ನಿಶ್ಚಯವಾಗಿದ್ದಾಗ ಗೌರಿಯು ಪ್ರತಿಭಟಿಸದೇ ಇದ್ದೂ, ತನ್ನ ಪ್ರೇಮಿ ಜಯರಾಮನ ರಕ್ತಸ್ನಿಗ್ಧ ದೇಹವನ್ನು ನೋಡಿದಾಗ ತನಗರಿವಿಲ್ಲದಂತೆಯೇ ಪವಿತ್ರ ಪ್ರೇಮದ ಸಂಕೇತವೆಂಬಂತೆ ಚಿಟ್ಟನೇ ಚೀರಿ, ರಕ್ತದ ಮಡುವಿನಲ್ಲಿದ್ದ ದೇಹವನ್ನು ಗಟ್ಟಿಯಾಗಿ ಅಪ್ಪಿಕೊಂಡು, ತನ್ನೆಲ್ಲಾ ಸಮಸ್ಯೆಗಳಿಗೆ ಉತ್ತರವೆಂಬಂತೆ ಶಾಶ್ವತವಾಗಿ ಜಯರಾಮನನ್ನು ಸೇರುವುದನ್ನು ಲೇಖಕರು ನೈಜವಾಗಿ ಹೃದಯ ಕಲಕುವಂತೆ ಚಿತ್ರಿಸಿದ್ದಾರೆ.

ಸಾಮಾಜಿಕ ಕಟ್ಟುಪಾಡುಗಳು, ಹೆಣ್ಣಿನ ಅಸಹಾಯಕತೆಯನ್ನು ಬಲಿಪಶುವಾಗಿ ಮಾಡಿದರೂ ಕಥೆಗಾರರು ಯಾಂತ್ರಿಕವಾದ ಮಾನವ ಸಂಬಂಧಗಳಿಗಿಂತ ಪವಿತ್ರ ಪ್ರೇಮವೇ ಶ್ರೇಷ್ಠವೆಂಬುದನ್ನು ಇಲ್ಲಿ ಎತ್ತಿ ಹಿಡಿದಿದ್ದಾರೆ. ಗೌರಿಯ ಪಾತ್ರದ ಮೂಲಕ ಸ್ತ್ರೀಗೆ ಸಹಜವಾದ ತಾಳ್ಮೆ, ಸಹನೆಗಳಿದ್ದರೂ ಅಂತ್ಯದಲ್ಲಿ ಆಕೆ ತನ್ನ ಮೌನದಲ್ಲಿಯೇ ಗುರಿ ತಲುಪಿ ಸಫಲತೆ ಪಡೆಯುತ್ತಾಳೆ ಎಂಬುದನ್ನು ಕಥೆಗಾರರು ಕಾಣಿಸುತ್ತಾರೆ. ಇಲ್ಲಿ ಲೇಖಕರ ಸ್ತ್ರೀ ಶೋಷಣೆ ವಿರುದ್ಧ ನಿಲ್ಲುವ ಆಶಯ ಮತ್ತು ಆ ಬಗ್ಗೆ ಕಳಕಳಿ ವ್ಯಕ್ತವಾಗುತ್ತದೆ.

ಅವರ 'ಗಾಂಧಿ' ಒಂದು ದುರಂತ ಕಥೆ. ಇದಕ್ಕೆ ಪ್ರೇರಣೆ ೧೯೭೪ರಲ್ಲಿ ಕೊಡಿಯಾಲ ಪ್ರಾಥಮಿಕ ಕೇಂದ್ರದಲ್ಲಿ ಕಥೆಗಾರರಿಗೆ ಆದ ನಿಜ ಘಟನೆ. ಈ ಕಥೆಯನ್ನು ಕೆ. ನರಸಿಂಹ ಮೂರ್ತಿ, ಡಿ.ಆರ್. ನಾಗರಾಜ, ಚಂದ್ರಶೇಖರ ಪಾಟೀಲ, ಗಿರಡ್ಡಿ ಗೋವಿಂದರಾಜ, ಕರೀಗೌಡ ಬೀಚನಹಳ್ಳಿ ಇನ್ನು ಮುಂತಾದ ವಿದ್ವಾಂಸರುಗಳು ಮೆಚ್ಚಿ ಚರ್ಚಿಸಿದ್ದಾರೆ. ಈ ಕಥೆಗಾರರ ನವ್ಯಪ್ರಜ್ಞೆ ಪ್ರಕಟವಾಗುವುದು ಇಂಥ ಕಥೆಗಳಲ್ಲಿ.

'ಗಾಂಧಿ' ಕಥೆಯಲ್ಲಿ ಬರುವ 'ಗಾಂಧಿ' ಎಂಬ ಬಡ ಹುಡುಗನ ಸಾವು ಗಾಂಧೀಜಿಯ ಎರಡನೆಯ ಸಾವು ಎಂಬಂತೆ ಧ್ವನಿ ಹೊಮ್ಮಿಸುತ್ತದೆ. ಆದರೆ ಹುಡುಗನ ಸಾವಿಗೆ, ಅವನ ಸುತ್ತಲಿನ ಪರಿಸರ, ವ್ಯವಸ್ಥೆ ಕಾರಣವಾಗುವುದರ ಬದಲು ಕುಟುಂಬದ ಮುಗ್ಧತೆ ಹಾಗೂ ಬಡತನವೇ ಕಾರಣವಾಗಿರುವಂತೆ ಕಥೆಯ ಅಂತ್ಯ ಸೂಚಿಸುತ್ತದೆ. ಹುಡುಗನ ತಂಗಿಯರು ಔಷಧಿಗಾಗಿ ಓಲೆಗಳನ್ನು ಗಿರವಿ ಇಡಲು ಕೊಡುವುದು: ಮತ್ತು ಹುಡುಗನ ಅಜ್ಜ ದುಡ್ಡಿಗಾಗಿ ಪರದಾಡುವುದು – ಈ ಚಿತ್ರಣ ಬಡತನದ ಬಗ್ಗೆ ಮರುಕ ಹುಟ್ಟಿಸುತ್ತದೆ. "ಕಥೆಯಲ್ಲಿರುವ ವ್ಯಂಗ್ಯ, ಈ ಕಾರಣದಿಂದಾಗಿ ಬೇರೆ ಆಯಾಮಗಳನ್ನು ಪಡೆದು ಬೆಳೆಯುತ್ತಾ ಹೋಗುವ ಬದಲು ಗುರಿತಪ್ಪಿ ಕಥೆಗೆ ದಕ್ಕಬೇಕಾಗಿದ್ದ ಆಳ ಪ್ರಾಪ್ತವಾಗದೆ ಹೋಗಿದೆ". (ಸಂಕ್ರಮಣ–೧೯೮೨, ಪು.೬೬) ಗಿರಡ್ಡಿಯವರ ಮಾತಿನಲ್ಲಿ ಹೇಳುವುದಾದರೆ, "ಮಹಾತ್ಮಾಗಾಂಧೀಜಿಯ ಹೆಸರು ಹೊಂದಿದ ಹಳ್ಳಿಯ

ರೋಗಗ್ರಸ್ತ ಬಡ ಹುಡುಗನೊಬ್ಬ ಆ ಹೆಸರಿನಿಂದಾಗಿಯೇ ವ್ಯಂಗದ ವಸ್ತುವಾಗುವುದು ಕಥೆಯ ಮುಖ್ಯ ಧಾಟಿಯಾಗಿದೆ. ಈ ಹಿನ್ನೆಲೆಯಲ್ಲಿ ಆ ಹುಡುಗನ ದುರಂತಕ್ಕೆ ಬಡತನ, ಅಜ್ಞಾನಗಳೇ ಕಾರಣವೆಂದು, ಕಥೆ ಒತ್ತಿ, ಒತ್ತಿ ಹೇಳುತ್ತದೆ'' (ಗಿರಡ್ಡಿ ಗೋವಿಂದರಾಜ–೧೯೮೩) ಈ ಕಥೆಯಲ್ಲಿ ಭಾವೋದ್ವೇಗದ ಅಂಶ ಕಂಡು ಬರುತ್ತದೆ. ಅದನ್ನು ಸಂಯಮದಿಂದ ನಿಯಂತ್ರಿಸಲು ಅನೇಕ ಕಡೆ ಪ್ರಯತ್ನಿಸಿ, ಪಾತ್ರಗಳಲ್ಲಿ ಮರುಕವನ್ನು ಮೂಡಿಸುತ್ತಾರೆ. ಬಡತನದಿಂದಾಗಿ ಹುಡುಗನ ಆದರ್ಶಗಳು ಮಣ್ಣು ಪಾಲಾಗುವುದರ ಜೊತೆಗೆ ರೋಗಗ್ರಸ್ತನಾದ ಹುಡುಗನ ಅಂತ್ಯದ ಮೂಲಕ ಕಥೆ ಕೊನೆಗೊಳ್ಳುತ್ತದೆ. ಕಥೆಯಲ್ಲಿ ಗಮನಿಸಬೇಕಾದ ಅಂಶವೆಂದರೆ ನಿಜವಾದ ಗಾಂಧೀಜಿಯ ಆದರ್ಶಗಳು ವಿಡಂಬನೆಗೆ ಗುರಿಯಾಗಿ, ಸುತ್ತಲಿನವರ ಅಸಹಾಯಕತೆ ಸೇರಿ, ಬಡತನದಲ್ಲಿರುವವರ ಯಾವುದೇ ಆಸೆ-ಆಕಾಂಕ್ಷೆಗಳು ಈಡೇರದೇ ಇರುವ ಸಾಂಕೇತಿಕತೆಯನ್ನು ಕಥೆಯಲ್ಲಿ ಕಾಣಬಹುದು. ಗಾಂಧೀಜಿಯ ಸಾವಿಗೆ ಕಾರಣವಾಗಿರಬಹುದಾದ ಅವನ ಸುತ್ತಲ ವಾತಾವರಣವೆಲ್ಲ ಕುಬ್ಜಗೊಂಡು ಒಂದೇ ಒಂದು ಅಂಶ ಪ್ರಾಧಾನ್ಯತೆಯನ್ನು ಪಡೆಯುತ್ತದೆ. ಗಾಂಧಿ ಹೆಸರಿನ ವ್ಯಂಗ್ಯವು ಶುರುವಾಗುವ ಸನ್ನಿವೇಶದಿಂದ ಹಿಡಿದು, ಅವನು ಸಾಯುವ ಘಟನೆಯವರೆಗೂ ಬಡತನದ ಬಗೆಗಿನ ಮರುಕವು ಮಾತ್ರ ಸ್ಥಾಯಿಯಾಗಿ ನಿಂತು ಬಿಡುತ್ತದೆ''. (ಸಾಹಿತ್ಯ ವಾರ್ಷಿಕ, ೧೯೮೧ ಪು. ೫೭)

ಗಾಂಧಿ ಎಂಬ ಹೆಸರಿಟ್ಟುಕೊಂಡಿರುವ ಬಡಹುಡುಗ ಎಷ್ಟು ಅಪಹಾಸ್ಯಕ್ಕೆ ಗುರಿಯಾಗುತ್ತಾನೆ ಎಂಬುದನ್ನು ಇಲ್ಲಿನ ಒಂದು ಸನ್ನಿವೇಶದ ಮೂಲಕ ತಿಳಿಯಬಹುದು. ''ಗೋಡೆಗೆ ತೂಗು ಹಾಕಿರುವ ಪೋಟೋ ಒಂದನ್ನು ತೋರಿಸಿ ಕೇಳಿದ, ''ಲೋ ಹುಡುಗ ಆ ಫೋಟೋ ಯಾರದಯ್ಯಾ''

''ಮಹಾತ್ಮ ಗಾಂಧಿಯೋರ್ದು ಸಾ, ಇದ ನಾ ಕಾಣನೆ?''
''ನಿನ್ನ ಹೆಸರೇನಯ್ಯ?''
''ಮಹಾತ್ಮ ಗಾಂಧಿ ಸಾ''
''ಸುಳ್ಳು ಹೇಳಬ್ಯಾಡ''
''ಸುಳ್ಳು ಹೇಳಿ ನಿಮ್‌ತಾವು ನಾನು ಯಾವ ಸಾಮ್ರಾಜ್ಯ ಈಸ್ಕೋಬೇಕು''.

ಆಸ್ಪತ್ರೆಯಲ್ಲಿ ಎಲ್ಲರೂ ಅವನ ಹೆಸರನ್ನು ವ್ಯಂಗ್ಯವಾಗಿ ನೋಡುತ್ತಾರೆ, ಕಥೆಯ ಉದ್ದಕ್ಕೂ ಗಾಂಧೀಜಿಯ ಆದರ್ಶಗಳು, ಮೌಲ್ಯಗಳು ತೀವ್ರ ವಿಡಂಬನೆಗೆ ಗುರಿಯಾಗಿವೆ.

'ಸಂತೆಯೊಳಗೊಂದು ಮನೆಯ ಮಾಡಿ' ಕಥೆಯಲ್ಲಿ ಲೇಖಕರ ಆಂತರಿಕ

ಬೆಳವಣಿಗೆಯ ಮತ್ತೊಂದು ದಿಕ್ಕನ್ನು ಕಾಣಬಹುದು. ಅಸಹಾಯಕ ಜೀವಿಗಳ ಅಸಹಾಯಕತೆ ಈ ಕಥೆಯಲ್ಲಿ ಚಿತ್ರಿತವಾಗಿದೆ. ಹಸುಳೆಯ ತಲೆ ಒಡೆದು ರಕ್ತ ಸುರಿಯಲು ಕಾರಣನಾಗಿದ್ದರೂ ಪರಾರಿಯಾಗುವ ಕಪ್ಪು ಕನ್ನಡಕದ ಸೈಕಲ್ ಸವಾರ, ಮನುಷ್ಯನಲ್ಲಿನ ಪಾಪಪ್ರಜ್ಞೆಯ ಸೋಂಕಿಲ್ಲದೆ ಕಾಡುಮೃಗದ ವರ್ತನೆಗೆ ಸಾಂಕೇತಿಕವಾಗುತ್ತಾನೆ. ಹಾಗೆಯೇ ಪೋಲಿಸ್ ಠಾಣೆ ಮತ್ತೊಂದು ಮೃಗೀಯ ಲೋಕವಾಗಿ ಪರಿಣಮಿಸುತ್ತದೆ. ಆದರೆ ಈ ಸಂಕಲನದ ಇತರ ಕಥೆಗಳಲ್ಲಿ ಆದರ್ಶದ ನೆಲೆ ಕಂಡು ಬರುವುದಿಲ್ಲ. ಇದು ಒಂದು ರೀತಿಯಲ್ಲಿ ಕಥೆಗಾರರ ಆಂತರಿಕ ಬೆಳವಣಿಗೆಯನ್ನು ಸೂಚಿಸುತ್ತದೆ. ಕಥೆಯಲ್ಲಿನ ವೈದ್ಯರು ಮತ್ತು ಪೋಲಿಸರು ದಬ್ಬಾಳಿಕೆಯಿಂದ ವರ್ತಿಸುವುದರಿಂದ ಮಕ್ಕಳು ಬಲಿಯಾಗುವುದನ್ನು ಕಾಣಬಹುದು.

'ಪ್ರಜಾಪ್ರಭುತ್ವ ಮತ್ತು ಮೂರು ಮಂಗಗಳು' ಕಥೆಯಲ್ಲಿ ಗಾಂಧೀಜಿಯ ಮೌಲ್ಯಗಳನ್ನು ಗಾಂಧೀಜಿಯ ಹೆಸರಿನಲ್ಲಿಯೇ ಕೊಲೆ ಮಾಡುವುದು ಹಾಗೂ ಪ್ರಜಾಪ್ರಭುತ್ವದ ಹೆಸರಿನಲ್ಲಿಯೇ ಸ್ವಾತಂತ್ರ್ಯ ಹರಣ ಮಾಡುವುದನ್ನು ಕಾಣಬಹುದು. ಇಲ್ಲಿ ವ್ಯಂಗ್ಯ (ಅಣಕ) ಯಶಸ್ವಿಯಾಗಿ ಬಂದಿದೆ. ಕಥೆಯಲ್ಲಿಯ ಒಂದು ಸನ್ನಿವೇಶ ಈ ಕೆಳಗಿನಂತಿದೆ:

"ಸಾ! ಒಂದು ಸ್ಪೆಷಲ್ ಕೇಸು ಸಾರು! ನೋಡಿ ಒಬ್ಬ ಕೋತಿ ಆಡಿಸೋನು......"

"ಹೂಂ! ಅದೇನ್ ಬೊಗಳು. ರಾಗ ಎಳೀಬೇಡ"

"ನೆಹರೂ ಸರ್ಕಲ್ ತಾವು ಸಾರ್! ತಾನು ಇರೋದು ತುರ್ತುಪರಿಸ್ಥಿತಿ ಅನ್ನೋದನ್ನ ತಿಳೀದೆ ಅಲ್ಕಾ ನನ್ನ ಮಗ ಏನು ಮಾಡ್ತಾಯಿದ್ದ ಸಾ..... ಅದ ನೋಡೋಕೆ ಅದೇನ್ ಜನ ಸಾ.."

"ಅದೇನ್ ಬೊಗಳೋ ಅಂದ್ರೆ......"

"ಮಹಾತ್ಮ ಗಾಂಧಿ ನಡೆಯೋದು ಹೆಂಗೆ: ಪೋಲಿಸ್ನೋರು ಜನಕ್ಕೆ ಹೊಡೆಯೋದು ಹೆಂಗ...ಅಮ್ಯಾಲೆ..."

"ಅದ್ಕೆ ಅವ್ನ ಒದ್ದು ಎಳ್ಕೊಂಡು ಬಂದುಬುಟ್ಟ: ಕಳ್ಳ ನನ್ನ ಮಗನೆ!"

"ಅಷ್ಟೆ ಅಲ್ಲ ಸಾರ್! ನಮ್ಮ ನೆಚ್ಚಿನ ಪ್ರಧಾನಮಂತ್ರಿ ಇಂದಿರಾಗಾಂಧಿಯವರು ಭಾಷಣ ಮಾಡೋದೆಂಗೆ ಅಂತ ಕುಣಿಸ್ತಾ ಇದ್ದ....."

ಸಾಮಾನ್ಯ ಮನುಷ್ಯನಾದ ಮಂಚನನ್ನು ಠಾಣೆಗೆ ಎಳೆದುಕೊಂಡು ಬರುವುದು ಪೋಲಿಸ್ ಇಲಾಖೆಯ ದೌರ್ಜನ್ಯಕ್ಕೆ ಸಾಕ್ಷಿಯಾಗಿದೆ. ಮಂಚನ ವಸ್ತುಗಳನ್ನು ಇನ್ಸ್‌ಪೆಕ್ಟರ್ ಶೋಧಿಸುತ್ತಿರುವಾಗ ಆ ಮೂರು ಮಂಗಗಳೂ ಟೇಬಲ್ಲಿನ ಮೇಲೆ

ನೆಗೆದು, ಒಂದು ಬಾಯಿ, ಇನ್ನೊಂದು ಕಿವಿ, ಮತ್ತೊಂದು ಕಣ್ಣು ಮುಚ್ಚಿ ಸಾಲಾಗಿ ಕುಳಿತಿದ್ದನ್ನು ಕಂಡ ಇನ್ಸ್‌ಪೆಕ್ಟರ್ ಮೈ ನೈತಿಕ ಭಯದಿಂದ ನಡುಗಿತು. ಗಂಭೀರವಾಗಿ ಕುಳಿತ ಮಂಗಗಳು ಗೋಡೆಯಲ್ಲಿ ತಗುಲಿ ಹಾಕಿದ್ದ ರಾಷ್ಟ್ರನಾಯಕರ ಭಾವಚಿತ್ರಗಳ ಮೇಲೆಯೇ ದೃಷ್ಟಿ ಇಟ್ಟಿದ್ದವು. ಇದನ್ನು ಕಂಡು ಈ ಮಂಗಗಳಿಗೂ ಮತ್ತು ಗಾಂಧೀಜಿಗೂ ಏನೋ ಸಂಬಂಧವಿದೆ ಎನ್ನಿಸಿದಾಗ ಮೊದಲನೆಯದು ಬಾಯಿ ಮುಚ್ಚಿ ಕೊಂಡಿದ್ದರ ಅರ್ಥ ಕೆಟ್ಟದ್ದನ್ನು ನುಡಿಯಬೇಡಾ ಎನ್ನುವುದು, ಎರಡನೆಯದು ಕಣ್ಣು ಮುಚ್ಚಿ ಕೊಂಡಿದ್ದರ ಅರ್ಥ ಕೆಟ್ಟದನ್ನು ನೋಡಬಾರದು ಎಂದು, ಮೂರನೆಯದು ಕಿವಿ ಮುಚ್ಚಿ ಕೊಂಡಿದ್ದರ ಅರ್ಥ ಕೆಟ್ಟದನ್ನು ಕೇಳಬಾರದು ಎಂದಾಗಿದೆ. ಈ ಕೋತಿಗಳು ಹೀಗೆ ಮಾಡಬೇಕಾದರೆ ಮಂಚನೇ ಕಾರಣ ಎಂದು ಇನ್ಸ್‌ಪೆಕ್ಟರ್ ತೀರ್ಮಾನಿಸಿ ದಫೇದಾರರನ್ನು ಕರೆದು ಮಂಚನಿಗೆ ಚೆನ್ನಾಗಿ ಥಳಿಸಲು ಹೇಳುತ್ತಾನೆ. ಅದರಂತೆ ದಫೇದಾರ ಮಂಚನನ್ನು ಥಳಿಸುತ್ತಾನೆ. ಪೋಲಿಸ್ ಕ್ರೌರ್ಯವನ್ನು ನೋಡುತ್ತಿದ್ದ ಕೋತಿಗಳು ಥಟ್ಟನೆ 'ಗುರ್' ಎಂದು ದಫೆದಾರನ ಕಡೆ ಹಾರುತ್ತವೆ. ಆತ ತನ್ನ ಕೈಯಲ್ಲಿದ್ದ ದೊಣ್ಣೆಯಿಂದ ಅವುಗಳನ್ನು ತಳ್ಳಲು ಪ್ರಯತ್ನಿಸುತ್ತಾನೆ. ಈ ದೃಶ್ಯವನ್ನು ನೋಡಿದ ಮಂಚ ಕೋತಿಗಳಿಗೆ ಹೀಗೆ ಹೇಳುತ್ತಾನೆ.

"ರಾಮ, ಸೀತೆ, ಅಭಿಮನ್ಯು! ಗಾಂಧಿತಾತ ಏನು ಹೇಳಿದ್ರು" ಎಂದ ತಕ್ಷಣ ಒಂದು ಗಂಡು ಕೋತಿ ಇನ್ನೊಂದು ಗಂಡು ಕೋತಿಗೆ ಪ್ರತೀಕಾರ ಮಾಡುವ ಬದಲು ತನ್ನ ಎಡಗೆನ್ನೆಯನ್ನು ತೋರಿಸುತ್ತದೆ. ಅದಕ್ಕೆ ಏಟಿನ ಮೇಲೆ ಏಟು ಬಿದ್ದರೂ ಪ್ರತಿಭಟಿಸದೇ ಗಾಂಧೀಜಿಯ ಸತ್ಯಾಗ್ರಹವನ್ನು ಪ್ರತಿಪಾದನೆ ಮಾಡುವ ರೀತಿಯಲ್ಲಿ ಗಂಭೀರವಾಗಿ ಕುಳಿತುಬಿಡುತ್ತದೆ. ಅದರಂತೆ ಹೆಣ್ಣು ಕೋತಿಯು ಕುಳಿತು ಬಿಡುತ್ತದೆ. ಈ ಕಥೆಯ ತಿರುಳು "ಸತ್ಯಾಗ್ರಹ, ಅದೂ ಕೋತಿಗಳಿಂದ. ಮನುಷ್ಯ ಮನುಷ್ಯನ ಮೇಲೆ ದೌರ್ಜನ್ಯ ಮಾಡಿದ್ದಕ್ಕಾಗಿ ಕೋತಿಗಳಿಂದ ಮಹಾತ್ಮನ ತತ್ವ ಪ್ರತಿಪಾದನೆ". ಹೀಗೆ ತುರ್ತುಪರಿಸ್ಥಿತಿಯಲ್ಲಿ ಪೋಲಿಸಿನವರಿಂದ ಪ್ರಜಾಪ್ರಭುತ್ವಕ್ಕೆ, ಗಾಂಧಿ ತತ್ವಗಳಿಗೆ ಉಂಟಾಗಿರುವ ದಕ್ಕೆಯನ್ನು ಮೂರು ಮಂಗಗಳ ಪ್ರಜ್ಞೆಯ ಮೂಲಕ ವ್ಯಂಗ್ಯದ ಧಾಟಿಯಲ್ಲಿ ಈ ಕಥೆಯಲ್ಲಿ ನಿರೂಪಿಸಿರುವ ರೀತಿ ಅದ್ಭುತವಾಗಿದೆ. "ವ್ಯಕ್ತಿಯ ಮಾನಸಿಕ, ಸೃಜನಾತ್ಮಕ ಜಗತ್ತಿನ ಮೇಲೆ ನಡೆಯುವ ಹಲ್ಲೆಯ ಕರಾಳ ಸ್ವರೂಪವನ್ನು ಈ ಕಥೆ ಅನಾವರಣ ಮಾಡುತ್ತದೆ. ಕಥೆಯಲ್ಲಿ ಸಾಂಕೇತಿಕತೆ ಸಹಜವಾಗಿ ಅಭಿವ್ಯಕ್ತವಾಗಿದೆ" (ಕರೀಗೌಡ ಬೀಚನಹಳ್ಳಿ – ೧೯೯೧ - ಪು ೧೯೩).

'ಬೇಲ' ಈ ಸಂಕಲನದಲ್ಲಿಯೇ ಅತ್ಯಂತ ದೊಡ್ಡ ಕಥೆ. ಶೃಂಗಾರವೇ ಇಲ್ಲಿ ಪ್ರಧಾನ. ಇದರ ವಸ್ತು ಪವಿತ್ರ ಪ್ರೇಮ. ೧೯೭೪ರಲ್ಲಿ ಬಿಹಾರದ ಬಾಗಲ್ಪೂರ ಜಿಲ್ಲೆಯಲ್ಲಿ ವಿಶ್ವ ಆರೋಗ್ಯ ಸಂಸ್ಥೆ ಅಡಿಯಲ್ಲಿ ವಿಶೇಷ ಸೇವೆ ಸಲ್ಲಿಸಲು ಹೋದಾಗ

ಪಿರ್‌ಶಾಂತಿ ಬ್ಲಾಕಿನ ಬಿಸಾಲ್ ಗ್ರಾಮದಲ್ಲಿ ಪರಿಚಯವಾದ ಗ್ರಾಮ ನರ್ತಕಿಯ 'ಸ್ನೇಹಫಲ' ಈ ಕಥೆ. ಆಕಸ್ಮಿಕವಾಗಿ ಪರಿಚಯವಾದ ಸ್ತ್ರೀಯ ಸ್ನೇಹ. ಗಾಢ ಸಂಬಂಧವಾಗಿ ಉಳಿಯುವುದೇ ಕಥೆಯ ವಿಶೇಷ ಎನ್ನಬಹುದು. ಸಾಮಾಜಿಕ ಪರಿವರ್ತನೆಯನ್ನುಂಟು ಮಾಡುವಲ್ಲಿ ಬೇಲಾಳ ಪಾತ್ರವನ್ನು ಮಾರ್ಮಿಕವಾಗಿ ಚಿತ್ರಿಸಲಾಗಿದೆ. ಸ್ತ್ರೀಯ ಸ್ಥಿತಿಗತಿ, ಸಹಜವಾಗಿ ಇಲ್ಲಿರುವ ಸತ್ವಹೀನ ಮೌಲ್ಯಗಳನ್ನು ತುಂಬು ಹೃದಯದಿಂದ ಸ್ವೀಕರಿಸುವ ಸ್ಥಿತಿಯನ್ನು ಕಥೆಯಲ್ಲಿ ಕಾಣಬಹುದು. ಸ್ತ್ರೀಯಲ್ಲಿರುವ ದೃಢತೆ, ದೇಶಪ್ರೇಮ, ಕಾಮವನ್ನು ಪಾವಿತ್ರತೆಯ ಹಿನ್ನೆಲೆಯಲ್ಲಿ ನೋಡುವುದು, ಇವುಗಳೆಲ್ಲ ಇಲ್ಲಿ ಗುರುತಿಸಲ್ಪಡುವ ಅಂಶಗಳು.

ಶೋಷಕ–ಶೋಷಿತರ ಮಧ್ಯದಲ್ಲಿ ಕಥೆ ಹೆಣೆದುದರಿಂದ ಇಲ್ಲಿ ಕಥೆ ಹೆಚ್ಚು ವಾಸ್ತವವಾಗಿ ಮೂಡಿ ಬಂದಿದೆ. "ಪ್ರತಿಯೊಬ್ಬ ಪುರುಷನ ಪ್ರಯತ್ನದ ಹಿಂದೆ ಸ್ತ್ರೀಯ ಪ್ರಯತ್ನವಿದೆ ಎಂಬುದಕ್ಕೆ ಸಾಕ್ಷಿ 'ಬೇಲಾ'. ಇಲ್ಲಿನ ಶೃಂಗಾರ ನಿರ್ವಹಣೆ ಅಶ್ಲೀಲದ ಗೆರೆ ತಾಕದಂತೆ ಮಧುರವಾಗಿದೆ. ಡಾಕ್ಟರನ ಸಣ್ಣತನವನ್ನು ತೋರಿಸುತ್ತಲೇ ಬೇಲಾಳ ಸುಸಂಸ್ಕೃತ ಮನಸ್ಸನ್ನು ಬಿಡಿಸುವ ವಿಧಾನ ಆಕರ್ಷಕವಾಗಿದೆ. ಸಿಡುಬುರೋಗದಂತೆ ವೇಶ್ಯಾವೃತ್ತಿಯನ್ನು ಒಂದು ಸಾಮಾಜಿಕ ಸಾಂಕ್ರಾಮಿಕ ರುಜೆ ಎಂಬುದನ್ನು ಕಥೆ ಏಕ ಕಾಲದಲ್ಲಿ ಮನವರಿಕೆ ಮಾಡಿಕೊಡುತ್ತದೆ. ಅದರಲ್ಲೇ ಮುಳುಗಿಯೂ ಆ ಬಗ್ಗೆ ವಸ್ತು ನಿಷ್ಠವಾಗಿ ಚಿಂತಿಸುವ ಬೇಲಾಳಲ್ಲಿ ಪ್ರಬುದ್ಧತೆ ಇದೆ. ವಿಟ ಮತ್ತು ನಟಿಯ ಮಾತಕತೆಯಲ್ಲಿ ದೇಶ ಪ್ರೇಮ ಪ್ರಕಟವಾದರೂ ಅದು ಕ್ರಿಯಾ ರೂಪ ತಾಳುವುದಿಲ್ಲ" (ಕನ್ನಂಬಾಡಿ ಮುನ್ನುಡಿ)

ಡಾಕ್ಟರ್ ಮತ್ತು ಬೇಲಾ ದೇಶದ ಸ್ಥಿತಿಗತಿಯ ಬಗೆಗೆ ಮಾತನಾಡುತ್ತಿರುವಾಗ, ಲೇಖಕನು ವೇಶ್ಯಾವೃತ್ತಿಯ ಸರ್ವನಾಶದ ಬಗೆಗೆ ಹೇಳಿರುವ ಮಾತುಗಳು ಇಲ್ಲಿ ಧ್ವನಿತವಾಗುತ್ತದೆ.

"ಬೇಲಾ, ಇದು ಅಸಾಧ್ಯವಾದ ವಿಷಯವಲ್ಲ"

"ಡಾಕ್ಟರ್! ವೇಶ್ಯಾವೃತ್ತಿಯನ್ನು ನಿರ್ಮೂಲ ಮಾಡುವುದು ಸಿಡುಬನ್ನು ನಿರ್ಮೂಲ ಮಾಡುವಷ್ಟು ಸುಲಭವಲ್ಲ: ಸಿಡುಬಿಗೆ ಒಂದು ವಿಷಕ್ರಿಮಿ ಕಾರಣ. ಆದರೆ ನಮ್ಮ ವೃತ್ತಿಗೆ ಮೂಲ ಕಾರಣ: ಗಂಡು! ಅಂದರೆ ಗಂಡಸಿನ ದಬ್ಬಾಳಿಕೆ ಮತ್ತು ಹೆಣ್ಣಿನ ಅಸಹಾಯಕತೆ!"

ಬೇಲಾ ವೇಶ್ಯೆಯಾಗಿದ್ದು, ಸಂಗೀತ, ಸಾಹಿತ್ಯ, ನೃತ್ಯಕಲೆಗಳಲ್ಲಿ ಪರಿಣತಿ

ಪಡೆದಿರುವುದು ಆಶ್ಚರ್ಯಕರವಾಗಿ ಕಂಡು ಬರುತ್ತದೆ. ವೇಶ್ಯೆಯಾಗಿದ್ದರೂ ಅವಳಲ್ಲಿ ಸಂಕುಚಿತ ಮನೋಭಾವನೆ ಇರದೆ, ನಿಸ್ವಾರ್ಥ ಮತ್ತು ವೈಚಾರಿಕ ಆಲೋಚನೆಗಳು ಕಂಡು ಬರುತ್ತವೆ.

"ಚಲುವನ ಪರಂಗಿ ಗಿಡಗಳು" ರಾಮಣ್ಣನವರು ಹಳೇಬೀಡಿನಲ್ಲಿದ್ದಾಗ ಬರೆದ ಕಥೆ. ರಷ್ಯಾದ ಮಹಾನ್ ಲೇಖಕರಲ್ಲಿ ಒಬ್ಬರಾದ 'ಆ್ಯಂಟನ್ ಚೆಕಾವ್'ರ ಮಾತೊಂದರಿಂದ ಪ್ರಭಾವಿತರಾಗಿ ರಚಿಸಿದ ಕಥೆಯಿದು. ಅವರೇ ಮನೆಯ ಸುತ್ತ ಬೆಳೆಸಿದ ಪರಂಗಿ ಗಿಡಗಳ ಹಿನ್ನೆಲೆಯಲ್ಲಿ ಪ್ರಭಾವಿತರಾಗಿ ಬರೆದರು. ಇಲ್ಲಿಯ ಕಥಾವಸ್ತು ಉಳಿದ ಕಥೆಗಳಿಗಿಂತ ಭಿನ್ನವಾಗಿದೆ. ದಲಿತ ಲೋಕದ ಸಾದೃಶ್ಯಗಳೇ ಇಲ್ಲಿ ಮುಂದುವರಿದಿವೆ. ಇದೊಂದು ಗಮನಾರ್ಹವಾದ ಕಥೆ. ಸಮಾಜ ಸೇವೆ, ಆ ಹೆಸರಿನಲ್ಲಿ ನಡೆಸುವ ಅವ್ಯವಹಾರ, ಪರಂಗಿ ಗಿಡಗಳನ್ನು ಕುರಿತ ಭಾಷಣ ಹಾಗೂ ಅದರಿಂದ ಚಲುವರಂತವರ ಮನದಲ್ಲಿ ನಡೆಯುವ ವಿಚಾರ ಸರಣಿ ಇವು ಕಥೆಯ ಮುಖ್ಯಾಂಶಗಳು.

ಚಲುವ ಭಾಷಣಗಳಿಂದ ಪ್ರೇರಿತನಾಗಿ ಪರಂಗಿ ಗಿಡಗಳನ್ನು ತನ್ನ ಮನೆಯವರ ಸಹಾಯದಿಂದ ತೋಟದಲ್ಲಿ ನೆಡುತ್ತಾನೆ. ಅದರ ನೆನಪಿನಲ್ಲಿಯೇ ಕಲ್ಪನೆಯನ್ನು ಕಾಣುತ್ತಾ ಹೋಗುವ ಹುಡುಗ, ತಮ್ಮ ಶ್ರಮವನ್ನು ಭೂಮಾಲಿಕ ಸಂಸ್ಕೃತಿ ದೋಚಿಕೊಂಡು ಹೋಗುವುದು, ಪರಂಗಿ ಗಿಡದಲ್ಲಿ ಬಿಟ್ಟಿರುವ ಕಾಯಿಗಳು ಸಾರ್ವಜನಿಕ ಸ್ವತ್ತಾದಾಗ ಉಂಟಾಗುವ ಘರ್ಷಣೆ, ಅಸಹಾಯಕತೆ ಇಲ್ಲಿ ಹೃದಯ ಕಲಕುವಂತೆ ಮೂಡಿ ಬಂದಿದೆ. ಚಲುವನ ಆಸೆಯ ದ್ಯೋತಕವಾಗಿ ಪರಂಗಿ ಗಿಡಗಳು, ಮೇಲ್ವರ್ಗದ ದಬ್ಬಾಳಿಕೆಗೆ ಒಳಗಾಗಿ ನುಚ್ಚುನೂರಾಗುವ ಸ್ಥಿತಿ ನೈಜವಾಗಿ ಮೂಡಿ ಬಂದಿದೆ.

'ಕ್ಷಯ', 'ಕರುಣಾಳು ಬಾ ಬೆಳಕೆ' ಮುಂತಾದ ಕಥೆಗಳಲ್ಲಿ ಭ್ರಷ್ಟತೆಯ ವಿವಿಧ ಮುಖಗಳು ಮೂಡಿ ಬಂದಿವೆ. ಆದರೆ 'ಗಂಗಾ', 'ಮಾನಭಂಗ'ದಂತಹ ಕಥೆಗಳಲ್ಲಿ ಹೊಸ ಬೆಳವಣಿಗೆಯ ಒಂದು ಅಂಶ ಕಂಡು ಬರುತ್ತದೆ. ಇಲ್ಲೆಲ್ಲ ಕೆಡಕಿನ ಚಿತ್ರಗಳೇ ಕಂಡುಬಂದಿವೆ. ಆದರೆ ಈ ಕಲ್ಪನೆ ಇಲ್ಲಿ ಭಿನ್ನವಾಗಿದೆ. ಮೊದಮೊದಲು ಕಥೆಗಳಲ್ಲಿ ರಾಜಕೀಯ ದಬ್ಬಾಳಿಕೆ ನಡೆಸುವ ಕೆಡಕು, ನಂತರ ಅದನ್ನು ತಾಳ್ಮೆಯಿಂದ ಬಗೆಹರಿಸುವ ಸ್ಥಿತಿಯನ್ನು ಕಂಡರೆ, ನಂತರದ ಕಥೆಗಳಲ್ಲಿ ಕೆಡಕು ಬದುಕಿನಲ್ಲಿ ಒಂದು ಶಾಶ್ವತ ಸ್ಥಿತಿಯನ್ನು ಪಡೆದುಕೊಳ್ಳುವುದನ್ನು ಕಾಣಬಹುದು.

'ಗಂಗಾ' ಕಥೆಯಲ್ಲಿ ಅಯ್ಯಂಗಾರ್ ನಿರೂಪಕನಿಗೆ ಹೇಳುತ್ತಾನೆ. "ಇಲ್ಲಿ ಶಿಕ್ಷೆಯಿಂದ ಪಾಪದ ಕ್ಷಯ ಸಾಧ್ಯವಿಲ್ಲ. ಕೆಲವು ದೇಶಗಳಲ್ಲಿ ಮಾನಭಂಗ ಮಾಡಿದವರಿಗೆ

ಕಲ್ಲಿನಿಂದ ಹೊಡೆದು ಕೊಲ್ಲುವ ಶಿಕ್ಷೆ ಈಗಲೂ ಜಾರಿಯಲ್ಲಿಲ್ಲವೇ? ಇಂಥ ದೇಶಗಳಲ್ಲೂ, ಇನ್ನೂ ಮಾನಭಂಗಗಳು ನಡೆಯುತ್ತಿಲ್ಲವೆ? ನಮ್ಮ ದೇಶದಲ್ಲೂ ಇತ್ತೀಚೆಗೆ ಕೊಲೆಯ ಆಪಾದನೆಯ ಮೇಲೆ ಬಹು ಮಂದಿಯನ್ನು ನೇಣುಗಂಭಕ್ಕೇರಿಸಲಿಲ್ಲವೆ? ಈ ನಮ್ಮ ಶಾಂತಿಪ್ರಿಯ ರಾಷ್ಟ್ರದಲ್ಲಿ ಕೊಲೆಗಳು ನಡೆಯುತ್ತಿಲ್ಲವೆ? ರಾಷ್ಟ್ರದ ಕಾನೂನು ಏನಾದರೂ ಶಿಕ್ಷೆ ಕೊಟ್ಟುಕೊಳ್ಳಲಿ? ಆದರೆ ನಮ್ಮಂಥವರು, ಇಂಥ ಪಾಪಿಗಳನ್ನು ಕ್ಷಮಿಸೆಂದೇ ದೇವರನ್ನು ಕೇಳುವುದು ಧರ್ಮ." ಕಥೆಯ ಕೊನೆಯಲ್ಲಿ ನಿರೂಪಕನ ಕ್ರಿಯೆ ಅಯ್ಯಂಗಾರ್‌ನ ಸಮರ್ಥನೆಯನ್ನು ಒಪ್ಪುವಂತಿದೆ. 'ಗಂಗಾ'ಳ ಜೀವಿತದ ಅಲ್ಪಕಾಲದಲ್ಲಿಯೇ ಅವಳು ಅನುಭವಿಸಿದ ನೋವು ಸಾವುಗಳು ಹೃದಯ ಕಲಕುವಂತಹವು. ಅವಳ ಮೇಲೆ ಅತ್ಯಾಚಾರ ಮಾಡಿದವರು ಅದೆಷ್ಟು ಕಾಮುಕರಿರಬಹುದೆಂದು ಎನ್ನುತ್ತಿದಂತೆಯೇ ನನಗರಿವಿಲ್ಲದಂತೆ 'ಪಾಪಿಗಳನ್ನು ಕ್ಷಮಿಸಿ ಪ್ರಭು' ಎಂಬ ವಾಕ್ಯವು ಪಾದ್ರಿಯು ವಿಧವೆಗೆ ಹೇಳಿದ ಮಾತುಗಳ ಪ್ರಭಾವದಿಂದ ಬಂದಿದೆ.

'ಮಾನಭಂಗ' ಕಥೆ ಇನ್ನೂ ದಟ್ಟವಾಗಿದೆ, ತಾನೇ ತೆಗೆದುಕೊಂಡ ನಿಲುವುಗಳಿಗೆ ವಿರುದ್ಧವಾಗಿ ನಡೆದುಕೊಂಡದ್ದು ಕಾಣುತ್ತದೆ. ಇಲ್ಲಿ ಮನುಷ್ಯ ಪರಿಸ್ಥಿತಿಯ ಒತ್ತಡಕ್ಕೆ ಹೇಗೆ ಒಳಗಾಗುತ್ತಾನೆ ಎಂಬುದು ಕಂಡುಬಂದಿದೆ. ಕೊನೆಗೆ ಊರಿಗಿಂತ ಜೈಲೇ ವಾಸಿ ಎಂಬ ತೀರ್ಮಾನಕ್ಕೆ ಬರುವುದು ಕಥೆಯಲ್ಲಿ ಚಿತ್ರಿತವಾಗಿದೆ. ಜನರ ಮಧ್ಯದಲ್ಲಿ ಬದುಕುವುದಕ್ಕಿಂತ ಕತ್ತಲೆಯಲ್ಲಿ ಬದುಕುವುದೇ ಮೇಲೆಂಬುದರ ನಿರ್ಧಾರಕ್ಕೆ ಬರುತ್ತಾನೆ.

'ಕಾಗೆ' (೧೯೯೩) 'ಪ್ರಜಾವಾಣಿ'ಯ ದೀಪಾವಳಿ ವಿಶೇಷಾಂಕದಲ್ಲಿ ಪ್ರಕಟವಾದ ಕಥೆ. ಪಕ್ಷಿಗಳಲ್ಲಿರುವ ಹಂಚಿ ತಿನ್ನುವ ಮನೋಭಾವ, ಮನುಷ್ಯನಲ್ಲಿ ಇಲ್ಲವಲ್ಲ ಎನ್ನುವ ಕೊರಗು ಇಲ್ಲಿ ವ್ಯಕ್ತವಾಗಿದೆ.

ಲೇಖಕರು ತಮ್ಮ ಮನೆಯ ಮಹಡಿಯಲ್ಲಿ ಕುಳಿತು ತಮ್ಮ ಹಿತ್ತಲಲ್ಲಿ ಬೆಳೆದ ಪರಂಗಿ ಗಿಡದಲ್ಲಿ ಬಿಟ್ಟ ಹಣ್ಣನ್ನು ತಿನ್ನಲು ಬಂದ ಕಾಗೆ, ಅದೇ ಹಣ್ಣಿಗೆ ಆಸೆ ಪಟ್ಟ, ಅಳಿಲಿಗೂ, ಮರಕುಟಿಕ ಹಕ್ಕಿಗೂ, ಅನಾಮಧೇಯ ಪುಟ್ಟ ಹಕ್ಕಿಗೂ ಹಣ್ಣನ್ನು ತಿನ್ನಲು ಅವಕಾಶ ಮಾಡಿಕೊಡಲು ದೂರದ ಮರದ ಎಲೆಗಳ ಮರೆಯಲ್ಲಿ ಅಡಗಿ ಕುಳಿತು ಅವುಗಳೆಲ್ಲ ತಿಂದು ಹೊರಟ ನಂತರ ತಾನು ಪುಷ್ಕಳವಾಗಿ ತಿಂದು, ತನ್ನ ಬಳಗವನ್ನು ಕರೆಯುತ್ತದೆ. ಇದು ಲೇಖಕರು ಮೊದಲ ದಿನ ಕಂಡ ದೃಶ್ಯ ಮೂರನೆಯ ದಿನ ಬೆಳಿಗ್ಗೆ ಪತ್ರಿಕೆಯಲ್ಲಿ ಕೋಮು ಗಲಭೆಯಲ್ಲಿ ನಿರಾಪರಾಧಿ ಯುವಕ ತನ್ನ ತಾಯಿಗೆ ಔಷಧಿ ತರಲು ಹೋದಾಗ ಮತಾಂಧ ಗುಂಪು ಅವನನ್ನು ಅಮಾನವೀಯವಾಗಿ ಕೊಲೆ ಮಾಡಿದ್ದರು. ಇದನ್ನು ಓದಿದ ಲೇಖಕರಿಗೆ 'ಅಯ್ಯೋ! ಪಾಪಿ ಮೃಗಗಳೇ' ಎಂದು ನಿಟ್ಟುಸಿರು ಬಿಡುತ್ತಾರೆ.

ಬುದ್ಧಿ, ಆಲೋಚನೆಗಳಿರುವ ಮನುಷ್ಯನ ಹೀನಕೃತ್ಯ ಕಂಡು ಮನುಷ್ಯರಿಗಿಂತ ಪ್ರಾಣಿ ಪಕ್ಷಿಗಳೇ ಮೇಲು ಎಂಬ ಸತ್ಯವನ್ನು ಕಂಡುಕೊಳ್ಳುತ್ತಾರೆ. ಲೇಖಕರು ಕಥೆಯಲ್ಲೇ ಹೇಳುವಂತೆ "ತಮ್ಮ ಬಳಗದ ಹಿತವನ್ನು ಲಕ್ಷಿಸುತ್ತಿದ್ದ ಕಾಕರಾಜ, ತಮ್ಮವರನ್ನೇ ಕೊಚ್ಚಿ ಕೊಲ್ಲುವ ಮನುಷ್ಯರಿಗಿಂತ ಮೇಲಿನವನಾಗಿ ಕಂಡ."

ರಾಮಣ್ಣನವರ ಕಥಾಸಾಹಿತ್ಯವನ್ನು ಮೆಚ್ಚಿಕೊಳ್ಳುತ್ತ ಡಾ. ಹಾ.ಮಾ. ನಾಯಕರು ಹೀಗೆ ಹೇಳುತ್ತಾರೆ: "ರಾಮಣ್ಣನವರ ಭಾಷೆ, ಪಾತ್ರಗಳು, ಸನ್ನಿವೇಶ, ಸಂದರ್ಭಗಳು ನೇರವಾಗಿ ಈ ನೆಲದ ಒಡಲಿನಿಂದ ಮೂಡಿ ಬಂದವು. ತಮ್ಮ ಹಳ್ಳಿ, ತಮ್ಮ ಜನಪದಗಳನ್ನು ಕುರಿತು ಅವರು ಆತ್ಮೀಯತೆಯಿಂದ ಬರೆಯಬಲ್ಲರು; ಪ್ರೀತಿ ಅಭಿಮಾನಗಳನ್ನು ಮೆರೆಯಬಲ್ಲರು. ಹಳ್ಳಿಯ ಬದುಕಿನ ಚಿತ್ರಣ ನಮ್ಮ ಸಾಹಿತ್ಯದಲ್ಲಿ ಹೇಳಿಕೊಳ್ಳುವಷ್ಟೇನೂ ಇಲ್ಲ. ರಾಮಣ್ಣನವರ ಹಾಗೆ ಹಳ್ಳಿಗಳನ್ನು ಬಲ್ಲವರಿಂದ ಈ ಕೊರತೆಯನ್ನು ತುಂಬುವುದು ಕಷ್ಟದ ಮಾತಲ್ಲ" ('ನೆಲದ ಒಡಲು' ಮುನ್ನುಡಿಯಿಂದ). ಡಾ.ಕೆ.ವಿ. ನಾರಾಯಣ ಹೀಗೆ ಬರೆಯುತ್ತಾರೆ: "ಕನ್ನಡದ ಸಣ್ಣ ಕಥೆಗಳ ಪರಂಪರೆಯನ್ನು ಬಲಪಡಿಸಿರುವ ಮುಖ್ಯ ಕಥೆಗಾರರಲ್ಲಿ ಒಬ್ಬರು. ಊರಿನ ಹೆಸರನ್ನು ತಮ್ಮ ಹೆಸರಿನ ಭಾಗ ಮಾಡಿಕೊಂಡದ್ದೂ ಅವರ ಹೊಸತನವಲ್ಲದೇ ಇದ್ದೀತು. ಆದರೆ ಅಂಥ ಊರನ್ನು ತಮ್ಮ ಕಥಾಜಗತ್ತಿನ ಕೇಂದ್ರಕ್ಕೆ ತಂದದ್ದು ಮಾತ್ರ ಗಮನಿಸಬೇಕಾದ ಅನನ್ಯತೆ" ('ಸುಗ್ಗಿ'ಯ ಮುನ್ನುಡಿ). ಡಾ. ಕಾಳೇಗೌಡ ನಾಗವಾರ ಅವರ ಮಾತಿನಲ್ಲಿ ಹೇಳುವುದಾದರೆ, "ಶೂದ್ರಜಗತ್ತಿನ ಜೀವನದಾಳದ ಒಳಜೀವಾಳಗಳಾದ ಸಂಪದ್ಭರಿತ ದುಡಿಮೆ, ನ್ಯಾಯನಿಷ್ಠೆಗಳನ್ನು ದಟ್ಟವಾಗಿ ಮೈಗೂಡಿಸಿಕೊಂಡಿರುವ ಡಾ. ಬೆಸಗರಹಳ್ಳಿ ರಾಮಣ್ಣ ಮಾತನಾಡುವುದಕ್ಕಾಗಲಿ ಬರೆಯುವುದಕ್ಕಾಗಲಿ ತೊಡಗಿದರೆಂದರೆ ಅಮಿತೋತ್ಸಾಹದ ಸಡಗರಗಳಲ್ಲಿರುತ್ತಾರೆ. ಹತ್ತೂದಿಕ್ಕಿನ ದೃಷ್ಟಿಕೋನದ ವಿಚಾರ ಮಥನದಿಂದ ಕಂಡುಕೊಂಡ ಗುರಿಯ ಕಡೆಗೆ ಸಾಗುವ ಅದಮ್ಯ ಹಿಗ್ಗು ಹಂಬಲಗಳು, ಇವರ ಬದುಕು ಮತ್ತು ಬರಹಗಳ ಮುಖ್ಯ ಬಂಡವಾಳ" ('ಗರ್ಜನೆ' ಬೆನ್ನುಡಿಯಿಂದ).

## ತೋಳಗಳ ನಡುವೆ

'ತೋಳಗಳ ನಡುವೆ' ಕಾದಂಬರಿಯ ವಸ್ತು ವರ್ಗ ಸಂಘರ್ಷ. ವ್ಯಕ್ತಿಗಳು ಯಾವುದಾದರೂ ಪರಿಸ್ಥಿತಿಗೆ ಸಿಕ್ಕಿಹಾಕಿಕೊಳುತ್ತಾರೆ. ಇದನ್ನು ರಾಜಕೀಯ ಪುಢಾರಿಗಳು ತಮ್ಮ ಬೇಳೆಬೇಯಿಸಿಕೊಳ್ಳಲು ಉಪಯೋಗಿಸಿಕೊಳ್ಳುವುದು, ಇದರಿಂದ ಲಾಭ ಪಡೆಯಲು ಹಂಬಲಿಸುವುದು, ಕೊನೆಗೆ ಮುಗ್ಧರಿಗೆ ಪುಢಾರಿಯ ಸ್ವಾರ್ಥ ಗೊತ್ತಾಗಿ, ಅವನನ್ನು ಮುಗಿಸಲು ಜಾತಿ ಕಲ್ಪನೆಗಳನ್ನು ಕಳೆದು ನಾವೆಲ್ಲ ಮನುಷ್ಯರು ಎಂಬ ಸತ್ಯವನ್ನು ತಿಳಿದು ಒಂದಾಗುತ್ತಾರೆ. ಅಂತಹ ದುಷ್ಟಶಕ್ತಿಗಳ ವಿರುದ್ಧ ನಿಂತು ತುಳಿಯುತ್ತಾರೆ ಎನ್ನುವುದು ಇಲ್ಲಿಯ ಮುಖ್ಯ ಅಂಶವಾಗಿದೆ.

"ಬೆಟ್ಟಕ್ಕೆ ಬ್ಯಾಗೆಯ ಇಕ್ಕಿದ್ದೋರಾರಮ್ಮ?
ಹಕ್ಕಿ ಬೆಂದೋ ಹಕ್ಕಿ ಮರಿ ಬೆಂದೋ ಗೀಜಗನ
ರೆಕ್ಕೆ ಬೆಂದು ಬಾಯ್ ಬಾಯ್ ಬಿಡುತಾವೆ"

ಹಾಡಿನೊಂದಿಗೆ ಉಲ್ಲೇಖಿತಗೊಂಡು ಮೂರ್ತಿ ಮತ್ತು ನಂದೀಶನ ಹೊಡೆದಾಟದಿಂದ ಆರಂಭವಾಗುತ್ತದೆ. ಜೀತದ ಹೊಲೆಯರ ಹುಡುಗ ಹಾಗೂ ಆತನ ಧಣಿಯ ಮಗನ ನಡುವೆ ನಡೆದ ಘರ್ಷಣೆ ಹಲವಾರು ಘಟನೆಗಳಿಗೆ ಪ್ರೇರಕವಾಗುತ್ತದೆ. ಇದರಲ್ಲಿ ಇಡೀ ಊರನ್ನೇ ಆವರಿಸಿಕೊಳ್ಳುತ್ತದೆ. ಸಮಾಜ ಘಾತುಕತನದ 'ತೋಳಗಳಿಗೆ' ಊರು ಬಲಿಯಾಗುವುದರಲ್ಲಿ ಮುಕ್ತಾಯವಾಗುತ್ತದೆ.

ನಂದೀಶ ಮತ್ತು ಮೂರ್ತಿಯವರ ನಡುವೆ ಸಣ್ಣ ಕಾರಣಕ್ಕಾಗಿ ಹೊಡೆದಾಟವಾಗುತ್ತದೆ. ಇದನ್ನು ಆ ಊರಿನ ಪುಢಾರಿ ವೆಂಕಟೇಗೌಡ ಬಣ್ಣಕಟ್ಟಿ ವರ್ಣ ಸಂಘರ್ಷಕ್ಕೆ ತಿರುಗಿಸಲು ಪ್ರಯತ್ನಿಸುತ್ತಾನೆ. ಈ ಮೋಸ ತಿಳಿದ ಎರಡೂ ಕಡೆಯವರು ವೆಂಕಟೇಗೌಡನನ್ನು ಹಳಿದಾಗ ತನ್ನ ವೈರಿ ಚನ್ನವೀರಯ್ಯನಿಗೆ ಹೇಗಾದರೂ ಕೆಟ್ಟ ಹೆಸರು ತರಲು, ಪಾರ್ವತಮ್ಮನ್ನ ಚನ್ನವೀರಯ್ಯ ಇಟ್ಟುಕೊಂಡಿದ್ದಾನೆ ಎಂದು ಊರಲ್ಲೆಲ್ಲ ತಿಳಿಸುತ್ತಾನೆ. ಇದರಿಂದ ಪಾರ್ವತಮ್ಮನ ಸಂಸಾರ ನೆಲಕಚ್ಚುತ್ತದೆ. ಕೊನೆಗ ಇದರ ಶಾಪವೆಂಬಂತೆ ತನ್ನ ಒಡಹುಟ್ಟಿದವನೇ ತನ್ನ ಹೆಂಡತಿಯನ್ನು ಸಂಭೋಗಿಸುತ್ತಿದ್ದಾಗ ಸದ್ದಿಲ್ಲದೆ ಬಂದೂಕಿನಿಂದ ತನ್ನನ್ನು ಕೊಂದುಕೊಳ್ಳುವಲ್ಲಿ ಕಾದಂಬರಿ ಮುಗಿಯುತ್ತದೆ. ತಪ್ಪು ಮಾಡಿದವರು ತಪ್ಪನ್ನು ತಿದ್ದುಕೊಂಡು ಹೋಗದಿದ್ದರೆ ಪರಿಸರವೇ ಅದನ್ನು ಸರಿಪಡಿಸುತ್ತದೆ ಎನ್ನುವುದು ಕಾದಂಬರಿಯ ಆಶಯ.

ವೆಂಕಟೇಗೌಡನಿಗೆ ಮೂರ್ತಿ, ನಂದೀಶರ ಘರ್ಷಣೆ ಕೇವಲ ತನ್ನ ರಾಜಕೀಯ ಕುತಂತ್ರಕ್ಕೆ ಒದಗಿದ ಒಂದು ಅವಕಾಶ ಮಾತ್ರ. ಈ ಹೊಡೆದಾಟವನ್ನು ತನ್ನ ಅನುಕೂಲಕ್ಕೆ ಉಪಯೋಗಿಸುವ ರಾಜಕೀಯ ಬುದ್ಧಿಯನ್ನು, ಸ್ವಾರ್ಥ ಪ್ರವೃತ್ತಿಯನ್ನು ರಾಮಣ್ಣನವರು ಮಾರ್ಮಿಕವಾಗಿ ನಿರೂಪಿಸಿದ್ದಾರೆ.

ಗ್ರಾಮೀಣ ಜನರ ಭಾಷೆಯ ನಗ್ನತೆಯನ್ನು ಈ ಮಾತುಗಳಿಂದ ಕಟ್ಟಿ ಕೊಟ್ಟಿದ್ದಾರೆ. ಉದಾಹರಣೆಗೆ:

"ತೊಡೆಗಳ ಮಧ್ಯ ತೂರಿಸಿ, ತೊಡೆ ಸಂದಿಗೆ ಕೈಹಾಕಿ 'ಅಡೆ'ಯನ್ನು ಹಿಸುಕಿದ. ನಂದೀಶ "ಅಯ್ಯೋಯ್ಯೋ ನಿಮ್ಮವ್ವ" ಎನ್ನುತ್ತಿದಂತೆಯೇ, ಇನ್ನೊಮ್ಮೆ ಜೋರಾಗಿ ಕೈಹಾಕಿ ಹಿಸುಕಿ ಎಳೆದು ಬಿಟ್ಟ."

ವೆಂಕಟೇಗೌಡ ತನ್ನ ಮೋಟಾರ್ ಬೈಕಿನಲ್ಲಿ ಅರೆತಿಮ್ಮಯ್ಯ ಹಾಗೂ ಆತನ ಮಗ ಮೂರ್ತಿಯನ್ನು ಹಾವನೂರಿನ ಪೋಲಿಸ್ ಸ್ಟೇಷನ್ನಿಗೆ ಒಯ್ದು ಹೊಡೆದಾಟದ ಕೇಸಿನ ಜೊತೆಗೆ ಅಸ್ಪ್ರುಶ್ಯತಾ ಪಾಯಿಂಟ್ ಸೇರಿಸುವುದು ಆತನ ಪುಢಾರಿತನಕ್ಕೆ ಸಾಕ್ಷಿಯಾಗಿದೆ. ಉದಾ: "ನೆಕ್ಸ್ಟು ಇಂಪಾರ್ಟೆಂಟ್ ಪಾಯಿಂಟೇನಪ್ಪಾ ಅಂದ್ರೆ ಇಷ್ಟೂ ಮುಂದುವರಿದಿರೋ ಕಲಿಯುಗದಾಗೆ ಒಬ್ಬ ಹೊಲೇರ ಹುಡುಗ್ನ ಒಬ್ಬ ಮುಂದುವರಿದಿರೋ ಜಾತಿ ಹುಡುಗ ಕೆಡೀಕಂಡು ರಕ್ತ ಸೋರೋತಂಕ ಬಡ್ಡಿರೋದು ಕೊಲೆಯತ್ನ ಅಂತ ಕಾಣ್ಸೆ".

ಮೇಲಿನ ವರ್ಗದಲ್ಲಿ ವೆಂಕಟೇಗೌಡ ಪುಢಾರಿಯಾದರೆ, ಕೆಳವರ್ಗದಲ್ಲಿ ಈರಯ್ಯ ಆಗುತ್ತಾನೆ. ಇವನ ಆಸಕ್ತಿಯೂ, ವೆಂಕಟೇಗೌಡನ ಹಾಗೆ ಹೆಸರು ಗಳಿಸುವುದೇ ಆಗಿದೆ. ಮೂರ್ತಿ, ನಂದೀಶರ ಜಗಳದ ಹಿನ್ನೆಲೆಯಲ್ಲಿ ತನ್ನ ನೆಲೆಯನ್ನು ಭದ್ರಮಾಡಿಕೊಳ್ಳಲು ಪ್ರಯತ್ನಿಸುವುದೇ ಆಗಿದೆ. ಜಿ.ಎಸ್.ಸದಾಶಿವರ ಮಾತಿನಲ್ಲಿ ಹೇಳುವುದಾದರೆ, "ಜಾತಿ ಒಂದು ರೀತಿಯಲ್ಲಿ ಇಲ್ಲಿ ಸಮಸ್ಯೆಗೆ ಮೂಲ. ಆದರೆ ಆ ಜಾತಿ ಮೇಲ್ವರ್ಗದವರ ಮತ್ತು ಮೇಲಕ್ಕೆ ಬಂದ ಕೆಳವರ್ಗದವರ ರಾಜಕೀಯಕ್ಕೆ ಉಪಯೋಗಿಸುತ್ತಾ ಹೋಗುವ ವಸ್ತುಸ್ಥಿತಿಯನ್ನು ರಾಮಣ್ಣನವರು ಕುತೂಹಲಕಾರಿಯಾಗಿ ನಿರೂಪಿಸುತ್ತಾರೆ. ಕಥೆ ಘಟನೆಯಿಂದ ಘಟನೆಗೆ ಸ್ವಾರಸ್ಯವಾಗಿ ಬೆಳೆಯುತ್ತಾ ಹೋಗುತ್ತದೆ. ಗ್ರಾಮೀಣ ಭಾಷೆಯ ಸತ್ವವನ್ನು ಮೈಗೂಡಿಸಿ ಕೊಟ್ಟಿರುವ ರಾಮಣ್ಣನವರ ಗದ್ಯ ಹಾಸ್ಯ ಮಿಶ್ರಿತ ಶೈಲಿ ಕೃತಿಯ ಓದನ್ನು ಸರಾಗ ಮಾಡುತ್ತದೆ" (ಕಾದಂಬರಿ ಮುನ್ನುಡಿ).

**ಶೋಕಚಕ್ರ**

ಕಥೆಯಿಂದ ಕಾವ್ಯಕ್ಕೆ ಪ್ರವೇಶ ಮಾಡಿದ ರಾಮಣ್ಣನವರು ವಾಚಾಳಿಕೆಯಿಂದ ಹೊರನಿಂತು ಮಿತಮಾತಿಗೂ ತಕ್ಕ ಹಾಗೆ ಬಳಸಿಕೊಂಡಿದ್ದಾರೆ. ಇಲ್ಲಿ ಬರುವ ವ್ಯಕ್ತಿ ಚಿತ್ರಗಳು, ವ್ಯಕ್ತಿಯ ಬದುಕಿನ ನಿಡಿ ನೋಟವಾಗಿವೆ. ಹಳ್ಳಿಯ ಬದುಕಿನ ಗಾಢ ಸಂಬಂಧ, ವ್ಯಕ್ತಿ ಪ್ರೇಮ, ಲಯದಗತ್ತು ಸೇರಿ, ಜೀವನಾನುಭವದಿಂದ ರೂಪಗೊಂಡ ಈ ಸಂಕಲನದ ಕವನಗಳಲ್ಲಿ ಮಾತಿನ ಆರ್ಭಟ, ವರ್ಣನೆಯ ನಯಗಾರಿಕೆ ಇಲ್ಲದೇ ಸರಳ, ಸುಂದರವಾಗಿ ಮೂಡಿ ಬಂದಿವೆ.

ಸಂಕಲನದ ಪ್ರಥಮ ಕವನ 'ಶೋಕ ಚಕ್ರ' (೧೯೮೦) 'ಇಂದಿನ ರಾಜಕೀಯ ವ್ಯಂಗ್ಯ ವನ್ನು ವಿವರಿಸುತ್ತದೆ. "ಅಶೋಕ ಚಕ್ರ ಶೋಕಿಸಿದೆ" ಎನ್ನುವಲ್ಲಿ ಬದುಕು ದು:ಖರಹಿತವೆಂದರೂ, ಅಲ್ಲಿಯೂ ಯಾವುದೋ ನೋವೂ ಇದೆ ಎನ್ನುವುದನ್ನು ತಿಳಿಸುತ್ತದೆ." "ಬಡವರ ಉದ್ಧಾರ ಗೀತೆಯ ಒಳಗೆ ಎನ್ನುವಲ್ಲಿ ರಾಷ್ಟ್ರದ ಆದರ್ಶ ಮೌಲ್ಯಗಳನ್ನು ಹೇಳುತ್ತಾ, ಶೋಷಣೆ ಮಾಡುತ್ತಾರೆ ಎಂಬ ಕೂಗಿದೆ. ರಾಜಕೀಯದ ಶೋಕಿಗಾಗಿ ಜನರೆದುರಿಗೆ ದೇಶ ಪ್ರೇಮ, ಬಡವರ ಉದ್ಧಾರದ ನೆಪದಲ್ಲಿ

ಭಾರತಮಾತೆಯನ್ನು ಶೋಷಿಸುವ ಹೀನಕೃತ್ಯಕ್ಕೆ ತೊಡಗಿದ್ದಾರೆ ಎಂಬ ರೋದನ ವ್ಯಕ್ತವಾಗುತ್ತದೆ.

ಸಾಹಿತ್ಯದ ಅಧ್ಯಯನ ಮನುಷ್ಯನಲ್ಲಿಯ ಮೃಗೀಯತೆಯನ್ನು ಹೋಗಲಾಡಿಸಿ ಮನುಷ್ಯನನ್ನಾಗಿಸುತ್ತದೆ. ಅದು ಕಷ್ಟ ಕಾಲದಲ್ಲಿ ಸತ್ಯಕ್ಕಾಗಿ ಅನ್ಯಾಯದ ವಿರುದ್ಧ ನಿಲ್ಲುವ ಶಕ್ತಿಯನ್ನು ಕೊಡುತ್ತದೆ ಎನ್ನುವುದನ್ನು 'ಸಾಹಿತ್ಯ' ಕವನದಲ್ಲಿ ಸುಂದರವಾಗಿ ಮೂಡಿ ಬಂದಿದೆ:

"ನೇಣನ್ನು
ನಿರ್ಲಿಪ್ತವಾಗಿ
ಎದುರಿಸುವ
ಸ್ಥೈರ್ಯ ನೀಡುತ್ತದೆ" (ಸಾಹಿತ್ಯ)

ಬದುಕನ್ನು ಸಾರ್ಥಕಗೊಳಿಸಿಕೊಳ್ಳಲು 'ನಿಷ್ಠೆ' ಇದ್ದರೆ ಸಾಕು ಎಂದು 'ಗುರಿ' ಕವನದಲ್ಲಿ ಹೇಳುತ್ತಾರೆ. ಹೃದಯ ಶ್ರೀಮಂತಿಕೆಯಿಂದ ಜನರನ್ನು ಪ್ರೀತಿಸುವಂತವನಾಗು, ಅವರ ಕಷ್ಟಗಳನ್ನು ಪರಿಹರಿಸು ಎಂದು 'ಚೇತನ' ನಿರೂಪಿಸುತ್ತದೆ. ರಾಜಕೀಯದಲ್ಲಿರುವ ದರ್ಪ, ಅಟ್ಟಹಾಸಗಳನ್ನು ಹೇಳುವುದರೊಂದಿಗೆ ಮತ್ತೊಂದೆಡೆ ಇಂತಹ ವಿಷವರ್ತುಲದಲ್ಲೂ ನ್ಯಾಯ, ಸತ್ಯ, ಪ್ರಾಮಾಣಿಕತೆಯಿಂದ ದುಡಿಯದವರೂ ಬೆರಳೆಣಿಕೆಯಷ್ಟಿದ್ದಾರೆ, ಹೋರಾಡುವ ವ್ಯಕ್ತಿಗಳೂ ಇದ್ದಾರೆ ಎನ್ನುವುದನ್ನು 'ಗೋಪಾಲಗೌಡರಿಗೆ', 'ಕೆ.ಎಿ. ಶಂಕರಗೌಡರಿಗೆ', 'ಓರ್ವ ನಿಷ್ಠಾವಂತ ಗಾಂಧಿವಾದಿಗೆ'. ಕವನಗಳಲ್ಲಿ ಮೂಡಿ ಬಂದಿದೆ:

"ಯಾರು ಸತ್ತರು? ನೀವೆ ಗೌಡರೆ!
ವಿಧಾನ ಸೌಧದ ಸುತ್ತ ಸತ್ಯ ಹುಡುಕಿದ ನಿಮಗೆ ಸಾವೆ?"
(ಶಾಂತವೇರಿ ಗೋಪಾಲಗೌಡರಿಗೆ)

"ಅಜ್ಞಾನದ ನೆಲವನುತ್ತು
ಜ್ಞಾನ ಬಿತ್ತಿದವನೆ?"
(ಕೆ.ವಿ. ಶಂಕರಗೌಡರಿಗೆ)

"ಕಾಡುಗಿಡಗಳ ನಡುವೆಯೇ
ಗಂಧದ ಮರಗಳು ಪಲ್ಲವಿಸುತ್ತವೆ"
(ಓರ್ವ ನಿಷ್ಠಾವಂತ ಗಾಂಧಿವಾದಿಗೆ)

ಮನುಷ್ಯ ಉನ್ನತ ಹಂತ್ತದಲ್ಲಿದ್ದರೂ ಮನುಷ್ಯ ಸಹಜ ಆಸೆ – ಆಮಿಷಗಳಿಗೆ ಬಲಿಯಾಗುವ ಕುಬ್ಜತನವನ್ನು ನಗ್ನ ದರ್ಶನದಲ್ಲಿ ಚಿತ್ರಸಿದ್ದಾರೆ. ಬದುಕಿನಲ್ಲಿ ಗುರಿತಲುಪುವಾಗ ಸೋಲನ್ನು ಅನುಭವಿಸುವವರು ಬಹುಮಂದಿ. ಆದರೆ ಗೆಲ್ಲುವರು ಬೆರಳೆಣಿಕೆಯಷ್ಟು ಮಂದಿ ಮಾತ್ರವೆ. ಎಂಬುದನ್ನು 'ಕಣಿವೆ'ಯಲ್ಲಿ ನಿರೂಪಿತವಾಗಿದೆ. ಬದುಕನ್ನು ಕಡಿದಾದ ಇಳಿಜಾರಿಗೆ ಹೋಲಿಸಿರುವುದರಿಂದ ಕವನಕ್ಕೆ ಜೀವಂತಿಕೆ ಬಂದಿದೆ. ಪರರ ದು:ಖಕ್ಕಾಗಿ ಕೊರಗಿ ಮರುಗುವ, ಬದುಕಿನ ಆಘಾತಗಳಿಗೆ ಬೆಚ್ಚಿಬಿದ್ದು, ಬದುಕಿನ ಎಲ್ಲ ಆಶೋತ್ತರಗಳು ಮಣ್ಣು ಪಾಲಾದವು ಎನ್ನದೆ, ಮತ್ತೆ ಪ್ರಯತ್ನದಲ್ಲಿ ತೊಡಗುವುದೇ ನಮ್ಮ ಸಂಸ್ಕೃತಿ ಎನ್ನುವುದಕ್ಕೆ 'ಅಪ್ಪ' ಕವನದಲ್ಲಿ ಮೂಡಿಬಂದಿದೆ.

ತಿಥಿ ಆದ ಮೂರನೆಯ ದಿನ ಕಬ್ಬು ನೆಡಲು ಹೊರಟಿದ್ದ
ನಿನ್ನ ಕೆಚ್ಚಿನ ಮುಂದೆ ವೇದಗಳು ನೆಗೆದು ಬಿದ್ದದ್ದ!"

(ಅಪ್ಪ)

ಎನ್ನುವಲ್ಲಿ ಸೋಲಿನ ಸೊರಗಲ್ಲೂ ಮತ್ತೆ ಗೆಲುವಿನ ಛಾಯವನ್ನು ರೂಢಿಸಿಕೊಂಡ ಅಪ್ಪನ ಆದರ್ಶವನ್ನು ಮೆಚ್ಚಿಕೊಂಡಿದ್ದಾರೆ.

'ಪ್ರಾರ್ಥನೆ' ಕವನದಲ್ಲಿ ಕವಿ ಕೊನೆಗೆ ಮನುಕುಲಕ್ಕೆ ಕಳಕಳಿಯಿಂದ ಪ್ರಾರ್ಥಿಸುತ್ತಾನೆ. ಮೇಲು, ಕೀಳೆಂಬ ಭಾವನೆ ಹೋಗಿ ನಾವೆಲ್ಲ ಒಂದೆಂಬ ಭಾವ ಬಂದು, ಕೈಗಳಿಗೆ ಶಕ್ತಿಯ ನೀಡು ಎಂಬ ಸಮಾನತೆಯ ಇಂಗಿತವನ್ನು ತೋಡಿಕೊಂಡಿದ್ದಾರೆ.

ವಿಸ್ತೃತ ಅನುಭವದಿಂದ ರೂಪ ಪಡೆದ ಒಂದೊಂದು ಕವನವೂ ಹೊಸತೊಂದು ಆವಿಷ್ಕಾರಹೊಂದಿ ಘಮ ಘಮವಿಸುತ್ತವೆ. ಸೂಕ್ಷ್ಮಗ್ರಹಿಕೆ, ತಾತ್ವಿಕ ಮಂಥನಗಳಿಂದ 'ಶೋಕಚಕ್ರ' ಸುಂದರ ಅಭಿವ್ಯಕ್ತಿಗೆ ಮತ್ತೊಂದು ಹೆಸರಾಗಿದೆ. ('ಶೋಕಚಕ್ರ'ದ ಬೆನ್ನುಡಿ.) ಈ ಕವನ ಸಂಕಲನವು 'ಕಾವ್ಯಲೋಕದ ತೋರುಗಂಬವಾಗಿದೆ' ಎಂದು ಚಿಕ್ಕಣ್ಣ ಅವರು ಹೇಳಿದ್ದಾರೆ.

## ಅನುಬಂಧ – ೧

# ಡಾ. ಬೆಸಗರಹಳ್ಳಿ ರಾಮಣ್ಣನವರ ಕೃತಿಗಳು

೧೯೬೭ ನೆಲದ ಒಡಲು (ಕಥಾಸಂಕಲನ)

೧೯೭೨ ಗರ್ಜನೆ (ಕಥಾಸಂಕಲನ)

೧೯೭೩ ನೆಲದ ಸಿರಿ (ಆಯ್ದ ಕಥೆಗಳು)

೧೯೭೬ ಹರಕೆಯ ಹಣ (ಕಥಾಸಂಕಲನ)

೧೯೭೯ ಒಂದು ಹುಡುಗನಿಗೆ ಬಿದ್ದ ಕನಸು (ಕಥಾಸಂಕಲನ)

೧೯೮೬ ಕನ್ನಂಬಾಡಿ (ಸಮಗ್ರ ಕಥಾಸಂಕಲನ)

೧೯೯೧ ಸುಗ್ಗಿ (ಆಯ್ದ ಕಥಾಸಂಕಲನ)

೧೯೯೦ ಶೋಕಚಕ್ರ (ಕವನ ಸಂಕಲನ)

೧೯೭೪ ರಕ್ತ ಕಣ್ಣೀರು (ಕಾದಂಬರಿ)

ತೋಳಗಳ ನಡುವೆ (ಕಾದಂಬರಿ)

ಅಚ್ಚಿನಲ್ಲಿ ಕೊಳಲು ಮತ್ತು ಖಡ್ಗ (ಕಥಾಸಂಕಲನ)

# ಅನುಬಂಧ – ೨

## ಹೆಚ್ಚಿನ ಓದು


೧. ಅಶೋಕ ಟಿ.ಪಿ. — ೧೯೯೧: ಸಾಹಿತ್ಯ ಸಂದರ್ಭ
ಹೆಗ್ಗೋಡು: ಅಕ್ಷರ ಪ್ರಕಾಶನ

೨. ಅಶೋಕ ಟಿ.ಪಿ. — ೧೯೯೩: ಪುಸ್ತಕ ಪ್ರೀತಿ
ಹೆಗ್ಗೋಡು: ಅಕ್ಷರ ಪ್ರಕಾಶನ

೩. ಕರೀಗೌಡ ಬೀಚನಹಳ್ಳಿ. — ೧೯೯೧: ವ್ಯಷ್ಟಿ ಸಮಷ್ಟಿ
(ಕನ್ನಡ ನವ್ಯಕಥೆಗಳ ಅಧ್ಯಯನ)
ಬೆಂಗಳೂರು: ಅಂಜಂತ ಪ್ರಕಾಶನ

೪. ಗಿರಡ್ಡಿ ಗೋವಿಂದರಾಜ — ೧೯೮೩: ಕನ್ನಡ ಕಥಾಸಂಕಲನ
ಪ್ರಸ್ತಾವನೆ, ಬೆಂಗಳೂರು
ವಿಶ್ವಕನ್ನಡ ಸಮ್ಮೇಳನ

೫. ಗಿರಡ್ಡಿ ಗೋವಿಂದರಾಜ — ೧೯೯೨: ಸಾತತ್ಯ
ಬೆಂಗಳೂರು
ಸ್ನೇಹ ಪ್ರಕಾಶನ

೬. ನಾಗರಾಜ್ ಆರ್.ಜಿ. ಹಳ್ಳಿ (ಸಂ) — ೧೯೮೮: ಅನ್ವೇಷಣೆ
(ಸಾಹಿತ್ಯ ಸಾಂಸ್ಕೃತಿಕ ಪತ್ರಿಕೆ,
ಸಂಚಿಕೆ ೨೬–೨೭ ಸಂಪುಟ-೪)
ಬೆಂಗಳೂರು

೭. ಪುರುಷೋತ್ತಮ ಬಿಳಿಮಲೆ — ೧೯೯೦: ಬಂಡಾಯ ದಲಿತ ಸಾಹಿತ್ಯ
ಬೆಂಗಳೂರು
ಕರ್ನಾಟಕ ಸಾಹಿತ್ಯ ಅಕಾಡೆಮಿ

೮. ಮೋಹನ ಕುಂಟಾರ್ — ೧೯೯೨: ಒಂದು ದಶಕದ ಕನ್ನಡ ಸಣ್ಣಕಥೆಗಳು
(೧೯೭೦-೮೦)
ಅಪ್ರಕಟಿತ ಪಿಎಚ್.ಡಿ. ಪ್ರಬಂಧ
ಮದುರೈ ಕಾಮರಾಜ ವಿಶ್ವವಿದ್ಯಾಲಯ

| | | |
|---|---|---|
| ೯. | ರಂಗಾರೆಡ್ಡಿ ಕೋಡಿರಾಂಪುರ ಮತ್ತು ಬೆನಕನಹಳ್ಳಿ ಜಿ. ನಾಯಕ (ಸಂ) | ೧೯೮೫: ಕಮಲಾಭಿನಂದನ ಬೆಂಗಳೂರು ಕಮಲಾ ಹಂಪನಾ ಅಭಿನಂದನ ಸಮಿತಿ |
| ೧೦. | ಶಿವರುದ್ರಪ್ಪ, ಜಿ.ಎಸ್. (ಸಂ) | ೧೯೭೮: ಸಾಹಿತ್ಯ ವಾರ್ಷಿಕ ೧೯೭೬ ಬೆಂಗಳೂರು : ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ |
| ೧೧. | ಶಿವರುದ್ರಪ್ಪ, ಜಿ.ಎಸ್. (ಸಂ) | ೧೯೭೬: ಸಾಹಿತ್ಯ ವಾರ್ಷಿಕ ೧೯೭೪ ಬೆಂಗಳೂರು : ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ |
| ೧೨. | ಶಿವರುದ್ರಪ್ಪ, ಜಿ.ಎಸ್. (ಸಂ) | ೧೯೮೧: ಸಾಹಿತ್ಯ ವಾರ್ಷಿಕ ೧೯೭೯ ಬೆಂಗಳೂರು : ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ |
| ೧೩. | ಶೇಷಗಿರಿರಾವ್ ಎಲ್.ಎಸ್. (ಪ್ರ.ಸಂ) | ೧೯೯೩: ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ ಬೆಂಗಳೂರು ಉದಯ ಭಾನು ಕಲಾ ಸಂಘ |

ಹಂಪಿಯ ಕನ್ನಡ ವಿಶ್ವವಿದ್ಯಾಲಯ ವಿದ್ಯೆಯನ್ನು ಕಲಿಯಲು ಅನುವು ಮಾಡಿಕೊಡುವ ಒಂದು ಸಂಸ್ಥೆಯೇ ಹೊರತು ಅದು ವಿದ್ಯೆಯನ್ನು ಕಲಿಸುವ ಸಂಸ್ಥೆಯಲ್ಲ. ನಮ್ಮ ನಾಡಿನಲ್ಲಿ ಹಳೆಯ ಕಾಲದ ತಿಳುವಳಿಕೆಯೊಂದಿದೆ. ಅಲ್ಲದೆ ಪಶ್ಚಿಮದಿಂದ ಹರಿದು ಬರುತ್ತಿರುವ ಜ್ಞಾನ ಪ್ರವಾಹವೂ ಇದೆ. ಈ ಎರಡೂ ತಿಳುವಳಿಕೆಗಳು ಒಂದಕ್ಕೊಂದು ಸಂಧಿಸಿ ಬೆಳಕನ್ನು ಉಂಟುಮಾಡಿವೆ. ಜೊತೆಗೆ ದಿಗ್ಭ್ರಮೆಯನ್ನೂ ತಂದಿವೆ. ಈ ತಿಳುವಳಿಕೆಗಳ ವಿವೇಕದ ವಿನಿಯೋಗ ಇಂದು ಅಗತ್ಯವಾಗಿದೆ. ಇಂಥ ವಿನಿಯೋಗಕ್ಕಾಗಿ ಹೊಸ ಬಗೆಯ ಶಾಸ್ತ್ರ ವಿಧಾನಗಳು ನಮಗಿಂದು ಬೇಕಾಗಿವೆ. ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆಯುತ್ತಿರುವ ಸಂಶೋಧನೆಯ ಗುರಿಯೆಂದರೆ ಈ ಶಾಸ್ತ್ರ ವಿಧಾನಗಳ ನಿರ್ಮಾಣ.

ನಾವು ನಮ್ಮ ನಮ್ಮಲ್ಲಿ ವಿಚಾರ ವಿನಿಮಯ ನಡೆಸಲು, ಒಬ್ಬರ ಅರಿವನ್ನು ಎಲ್ಲರೂ ಹಂಚಿಕೊಳ್ಳಲು ವಿಶ್ವವಿದ್ಯಾಲಯದಲ್ಲಿ ಪ್ರತಿವಾರ ಮಂಟಪ ಎಂಬ ಕಾರ್ಯಕ್ರಮ ನಡೆಸುತ್ತೇವೆ. ಅಲ್ಲಿ ಹೊಮ್ಮಿದ ವಿಚಾರಗಳು ನಮ್ಮ ಅರಿವನ್ನು ಹೆಚ್ಚಿಸಿದಂತೆ ನಿಮಗೂ ಲಾಭದಾಯಕವಾಗುವವೆಂಬ ನಂಬಿಕೆಯಿಂದ ಪುಸ್ತಿಕೆಗಳ ರೂಪದಲ್ಲಿ ಅವನ್ನು ಪ್ರಕಟಿಸಿ ನಿಮ್ಮ ಕೈಗಿಡುತ್ತಿದ್ದೇವೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು